# ನಾಡುಗಬ್ಬಗಳು

ಶಾರಘುನ. S.B.

ಮೊದಲು ಮುದ್ರಣ.
೧೫ ಅಗಸ್ಟ, ೧೯೫೪.
ಒಂದು ಸಾವಿರ ಪ್ರತಿಗಳು.

ಮುದ್ರಕರು.
ಎ. ಎಚ್. ನಾಗರಾಳ.
ವಿಜಯಾ ಆರ್ಟ ಪ್ರೆಸ್, ಗುಳೇದಗುಡ

ಪ್ರಕಾಶಕರು.
ಎಸ್. ಬಿ. ಕಾರಕೂನ, ಗುಳೇದಗುಡ್ಡ.

ಹರಿಃಓಂ।

# ಆತ್ಮ ನಿವೇದನೆಯು.

ಈಗನಾವಿರುವುದು ಸ್ವಾತಂತ್ರ್ಯದಯುಗ, ಜಗತ್ತಿನಲ್ಲೆಲ್ಲೂ ಸ್ವಾತಂತ್ರ್ಯ ದಕೂಗೇ ಕೇಳಿಬರುತ್ತಿದೆ. ಪಾರತಂತ್ರ್ಯದಲ್ಲಿ ಬಳಲಿ ಬೆಂಡಾದರಾಷ್ಟ್ರಗಳೆಲ್ಲವೂ ತಮ್ಮ ಮುಕ್ತತೆಗಾಗಿ ಕಳೆದ ಅರ್ಧಶತಮಾನದಿಂದ ಅವ್ಯಾಹತವಾಗಿ ಹೋರಾಟನಡಿಸಿದ್ದು ಕೆಲವುಗಳು ಸ್ವಾತಂತ್ರ್ಯಗಳಿಸಿವೆ; ಬೇರೆಕೆಲವು ಸ್ವಾತಂತ್ರ್ಯ ದೇವಿಯ ಆವಿರ್ಭಾವವನ್ನು ಆಶಾಮಯದಿಟ್ಟಿಯಿಂದ ನಿರೀಕ್ಷಿಸುತ್ತಿವೆ.

ಇಂಥ ಹೋರಾಟದಲ್ಲಿ ದಾದಾಭಾಯಿ ನವರೋಜಿ, ಲೋಕಮಾನ್ಯ ಟಿಳಕರಿಂದ ಮೊದಲು ಮಾಡಿ ಮಹಾತ್ಮಾ ಗಾಂಧಿಯವರ ವರೆಗೆ ಸ್ವಾತಂತ್ರ್ಯ ಯೋಗಿಗಳು ಮಾಡಿದ ತಪಸ್ಸಿನ ಫಲವಾಗಿ ನಮ್ಮ ಭೂಮಿಗೆ ರಕ್ತವಿರಹಿತ ಕ್ರಾಂತಿಯಿಂದ ಸ್ವಾತಂತ್ರ್ಯ ಲಭಿಸಿದುದು ನಮ್ಮ ಸುದೈವವೇಸರಿ!

ಮೇಲ್ಕಾಣಿಸಿದ ಸ್ವಾತಂತ್ರ್ಯ ವೀರರು ತಮ್ಮ ತಮ್ಮ ತನು ಮನ ಧನಗಳ ಹೋಮಮಾಡಿ ನಮಗೆ ರಾಜಕೀಯ ಸ್ವಾತಂತ್ರ್ಯವನ್ನು ಗಳಿಸಿ ಕೊಟ್ಟರು, ಆದರೆ ಆಂತರಿಕ ಶುದ್ಧಿ ಸ್ವಾತಂತ್ರ್ಯಗಳನ್ನು ದೊರಕಿಸುವದು ಪ್ರತಿಯೊಬ್ಬ ಭಾರತೀಯನ ವೈಯಕ್ತಿಕ ಹೋರಾಟವನ್ನವಲಂಬಿಸಿರುವದೆಂಬುದು ಲಕ್ಷಿಸತಕ್ಕ ಮಾತಾಗಿದೆ.

ಸ್ವಾತಂತ್ರ್ಯವೆಂದರೆ ಉಚ್ಛೃಂಖಲ ವೃತ್ತಿಯಲ್ಲ. ಈಗ ರಾಜಕೀಯ ಸ್ವಾತಂತ್ರ್ಯ ದೊರಕಿದಾಕ್ಷಣಕ್ಕೆ ನಮ್ಮ ಹೋರಾಟ ನಿಂತಂತಾಗಲಿಲ್ಲ. ಮಾನವನಜೀವನವೇ ಹೋರಾಟಮವಾಗಿದೆ. ಹೋರಾಟವೇ ಮಾನವ ಜೀವನದ ತಿರುಳು. ಹೋರಾಟದಿಂದಲೇ ಮಾನವನಿಗೆ ಇಹಪರ ಸೌಖ್ಯಗಳು ಲಭಿಸುವವು. ಜಗತ್ತು ಇನ್ನೂ ಸ್ವಾರ್ಥಸಾಧಕರೂ, ರಕ್ತಪಿಪಾಸುಗಳೂ ಆದ ರಕ್ಕಸರಿಂದ ತುಂಬಿದೆ ಅವರೊಡನೆ ಜಗತ್ತಿನಲ್ಲಿಯ ಎಲ್ಲ ಸ್ವಾತಂತ್ರ್ಯ ಫಲಭುಭುಕ್ಷುಗಳಾದ ರಾಷ್ಟ್ರಗಳ ಜನರೆಲ್ಲರೂ ಒಟ್ಟಾಗಿ ಸೇರಿ ಸಾತ್ವಿಕ ಹೋರಾಟವನ್ನು ಹೂಡಿ, ವಿಶ್ವದಲ್ಲಿ ಶಾಶ್ವತ ಶಾಂತಿಯನ್ನು ಪ್ರಸ್ಥಾಪಿಸ ಬೇಕಾಗಿದೆ ಇದಲ್ಲದೆ ವಿಶ್ವಶಾಂತಿ ಸಂಸ್ಥಾಪನೆಗೆ ಜನತೆಯಲ್ಲಿ ಅಂತಃಶುದ್ಧಿ, ಆತ್ಮನಿಯಂತ್ರಣ, ನಿಃಸ್ವಾರ್ಥತೆ, ಪರೋಪಕಾರ ಬುದ್ಧಿ ಮುಂತಾದ ಸದ್ಗುಣಗಳೇ ಬಲವತ್ತರವಾದ ಅಸ್ತ್ರಗಳು. ಇವುಗಳಲ್ಲದೇ ವಿಶ್ವದಲ್ಲಿ ಶಾಂತಿಯು ತಲೆದೋರದು! ಶಾಂತಿಯಿಲ್ಲದೆ ಸ್ವಾತಂತ್ರ್ಯಫಲ ಭಕ್ಷಣೆಯ ಸುಖ ಲಭಿಸದು!

ಯುದ್ಧಕಾಲದಲ್ಲಿ ಸೇನಾಪತಿಗಳಲ್ಲಿಯೂ, ಸೈನಿಕರಲ್ಲಿಯೂ ಸಾಮಾನ್ಯ ಜನತೆಯಲ್ಲಿಯೂ ಕೂಡ, ಸ್ವದೇಶಾಭಿಮಾನವೂ, ಸ್ವಾಭಿಮಾನವೂ, ನಿಃಸ್ವಾರ್ಥತೆಯೂ, ಕಾರ್ಯಸಾಹಸಿಗತೆಯೂ, ಕಂಡು ಬಂದರೂ ಯುದ್ಧ ಕೊನೆಗೊಂಡಮೇಲೆ ಉಭಯ ಪಕ್ಷಗಳಲ್ಲಿಯೂ, ಔದಾಸೀನ್ಯವೂ ಶಿಥಿಲತೆಯೂ, ಅನಾಸ್ಥೆಗಳೂ ಆವರಿಸಿ, ಅವರಲ್ಲಿ ಮಾನಸಿಕ ಅಧೋಗತಿಯೂ, ನೀತಿ ಶೈಥಿಲ್ಯವೂ ಸ್ವಾರ್ಥವೂ ತಲೆದೋರುವದು ಸ್ವಾಭಾವಿಕವು. ಅದರಂತೆಯೇ ನಮ್ಮ ಭಾರತದಲ್ಲಿ ಕಾಂಗ್ರೆಸ್ ಯೋಧರು ಅಹಿಂಸೆ, ಸತ್ಯ, ಪ್ರೇಮ, ಮುಂತಾದ ಅಸ್ತ್ರಗಳಿಂದ ಆಳರಸರೊಡನೆ ಹೋರಾಡಿ ರಕ್ತವಿರಹಿತ ಕ್ರಾಂತಿಯುದ್ಧದಲ್ಲಿ ಜಯಶೀಲರಾದರೂ, ಯುದ್ಧಾನಂತರದ ಅನಿಷ್ಟಗಳು ಸ್ವಾಭಾವಿಕವಾಗಿಯೇ ತಲೆದೋರಿರುವವು. ಅದರಲ್ಲೂ ಮಹಾತ್ಮರಂಥ ಸೇನಾನಾಯಕನು ನಮ್ಮ ದುರ್ದೈವದಿಂದ ಆಯುತ ಸಮಯದಲ್ಲಿ ಅಂತರ್ಧಾನನಾದ ಮೇಲೆ ಕೇಳುವದೇನು? ಆದರೂ ನಾವು ನಿರಾಶರಾಗುವ ಕಾರಣವಿಲ್ಲ. ಮಹಾತ್ಮರ ಗರಡಿಯಲ್ಲಿ ಸಾಧನ ಮಾಡಿ ಸಿದ್ಧಿ ಪಡೆದ ಉಪಸೇನಾನಾಯಕರು ನಮ್ಮ ರಾಷ್ಟ್ರನೌಕೆಯ ಚುಕ್ಕಾಣಿಯನ್ನು ಹಿಡಿದು ಪ್ರಸ್ತುತ ಬಿರುಗಾಳಿಯಲ್ಲಿ ನಮ್ಮನ್ನು ಸುರಕ್ಷಿತವಾಗಿ ಶಾಂತಿತೀರಕ್ಕೆ ವಯ್ಯು ಮುಟ್ಟಿಸಲು ಟೊಂಕಕಟ್ಟಿ ನಿಂತಿರುವರು ಅವರ ನೇತೃತ್ವದಲ್ಲಿ ಹತ್ತೆಂಟು ವರುಷಗಳಲ್ಲಾದರೂ ನಮ್ಮ ಕಂಟಕಗಳೆಲ್ಲ ದೂರಾಗಿ ನಮಗೆ ದೊರೆತ ಸ್ವಾತಂತ್ರ್ಯದ ಸತ್ಫಲಗಳನ್ನುಪಭೋಗಿಸಲು ಸಂಧಿಯು ಬಂದೇಬರುವದು.

ಪ್ರಸ್ತುತಪ್ರಕ್ಷುಬ್ಧ ವಾತಾವರಣವನ್ನೆದುರಿಸಲು ತಾಳ್ಮೆಯೂ, ಆತ್ಮನಿಯಂತ್ರಣೆಯೂ, ನಾಯಕರಲ್ಲಿ ಅಚಲ ಭಕ್ತಿ ವಿಶ್ವಾಸಗಳೂ, ನೀತಿಮತ್ತೆಯೂ, ಮುಂತಾದವುಗಳೇ ಅವಶ್ಯಕವಾದ ಸಾಧನಗಳಾಗಿವೆ. ಈ ಸಾಧನಗಳೇ ನಮ್ಮನ್ನು ಸುರಕ್ಷಿತವಾಗಿ ಶಾಂತಿತೀರಕ್ಕೆ ಮುಟ್ಟಿಸುವುವಲ್ಲದೇ ವಿಶ್ವದಲ್ಲಿ ಶಾಂತಿ ಸಾಮ್ರಾಜ್ಯವನ್ನು ಸ್ಥಾಪಿಸಲನುವಾಗುವವು.

ಈ ಉದ್ದಿಶ್ಯದಿಂದಲೇ ಈ ಅಲ್ಪ ಸಾಹಸವು ಕೈಕೊಳ್ಳಲ್ಪಟ್ಟಿದೆ. ಇದನ್ನು ಓದಿದ ಮೇಲೆ ಓದುಗರಲ್ಲಿ ನೀತಿಯ ಬಗ್ಗೆ ಪ್ರೇಮಾದರಗಳು ಉದ್ಭವಿಸಿದರೆ ಕಬ್ಬಿಗನ ಕಾರ್ಯವು ಸಫಲವಾದಂತಾಗಿ ಕೃತಾರ್ಥನಾಗುವನು!

**ಸಜ್ಜನರ ಅಡಿಯಾಳು.**
**ಕಬ್ಬಿಗ.**

# ಮುನ್ನುಡಿ

ಹಿರಿಯ ಸ್ನೇಹಿತರಾದ ಶ್ರೀ. ಕಾರಕೂನ ಅವರು ತಮ್ಮ ನಾಡುಗಬ್ಬ ಗಳಿಗೆ ಮುನ್ನುಡಿ ಬರೆಯಲು ನನ್ನನ್ನು ಕೇಳಿದ್ದಾರೆ. ಆದರೆ ಆ ವಿಷಯ-ದಲ್ಲಿ ನನಗೆ ಬಲವಾದ ಸಂದೇಹವುಂಟಾಗಿದೆ. ಶ್ರೀ. ಕಾರಕೂನ ಅವರು ಉದಾತ್ತ ವಿಷಯಗಳ ಮೇಲೆ ಕವನಗಳನ್ನು ಕಟ್ಟಿದ್ದಾರೆ; ಅವುಗಳಲ್ಲಿ ಕೆಲವು ನನ್ನ ಹಿಡಿತಕ್ಕೆ ಸಿಕ್ಕದೆ ಮೇಲೇರುವುದರಿಂದ ನನಗೆ ಸಂದೇಹ. ಅವುಗಳಲ್ಲಿ **ಮಹರ್ಷಿ ಅರವಿಂದರ ಸಂದೇಶ ಕರ್ಮಕಥೆ, ಅಂಬಿಗ,** ಇವುಗಳನ್ನು ಎತ್ತಿ ಹೇಳಬಹುದು.

ಇನ್ನು ಕೆಲವು ಸುಲಭವಿಷಯಗಳನ್ನೊಳಗೊಂಡಿವೆ. **ನಾಡಗುಡಿ, ಕುಟ್ಟುವ ಪದ** ಮೊದಲಾದವುಗಳು. ವಿಷಯವು ಘನವಾದುದೇ ಇರಲಿ ಸರಳವಾದುದೇ ಇರಲಿ ಇವರು ಆಯ್ದುಕೊಂಡ ಛಂದೋಬಂಧಗಳು ಮಾತ್ರ ಸರಳವಾಗಿವೆ. ಅಲ್ಲಲ್ಲಿ ಇವರು ಜನಪದಗೀತೆಗಳ ಬಂಧವನ್ನು ಸುಖವಾಗಿ ಬಳಸಿಕೊಂಡಿದ್ದಾರೆ.

ಜನರು ನೀತಿಯ ಕಡೆಗೆ ಒಲಿಯಬೇಕೆಂಬ ಹಂಬಲ ಈ ಹಾಡು ಗಳಲ್ಲಿ ಹೆಚ್ಚಾಗಿ ಕಂಡು ಬರುತ್ತದೆ. ಮದಿರಾ ದೇವಿಯ ಪಾಶದಿಂದ ಜನರು ಮುಕ್ತರಾಗಬೇಕೆಂಬ ಉದ್ದೇಶವನ್ನಿಟ್ಟುಕೊಂಡು ಇವರು ಮದಿರೆಯ ಬಗೆಗೆ ಗೀತೆಗಳನ್ನು ರಚಿಸಿದ್ದಾರೆ.

ಜಾತಿ ಭೇದವನ್ನು ಕುಗ್ಗಿಸಿ ಜನತೆಯಲ್ಲಿ ರಾಷ್ಟ್ರೀಯ ಭಾವನೆಯನ್ನು ಪ್ರೇರಿಸುವ ಹಾಡುಗಳು ಈ ಸಂಗ್ರಹದಲ್ಲಿ ಸೇರಿಸಿದುದು ಉಚಿತವೇ ಆಗಿದೆ. ಜಾತಿಭೇದವನ್ನು ತೊಡೆದು ಹಾಕಲು ಅವತರಿಸಿದಮಹಾತ್ಮರ ನೀತಿಗಳೂ ಇದರಲ್ಲಿ ಅಡಕವಾಗಿವೆ. **ನೇಸರ** ಮೊದಲಾದ ಒಂದೆರಡು ಹಾಡುಗಳು ನಿಸರ್ಗವನ್ನು ಬಣ್ಣಿಸತಕ್ಕಂಥವುಗಳಾಗಿವೆ. ಈ ಗೀತೆಗಳಿಗಾಗಿ ಆಯ್ದುಕೊಂಡ ಛಂದೋಬಂಧಗಳಲ್ಲಿ ವಿಶೇಷವಾಗಿ ವೈವಿಧ್ಯ ಕಾಣುವುದಿಲ್ಲವೇನೋ ನಿಜ. ಆದರೆ ಬಳಿಸಿಕೊಂಡ ಮಟ್ಟುಗಳು ಸರಳ ವಾಗಿರುವುದರಿಂದ ಪದಗಳನ್ನು ಹಾಡಲು ಅನುಕೂಲವಾಗಿದೆ. ಶ್ರೀ ಕಾರಕೂನ ಅವರ ಸಂಗ್ರಹವು ಬೇಗನೆ ಅಚ್ಚಿನಲ್ಲಿ ಹಾಯ್ದು ಪ್ರಕಟವಾಗಿ ನಮ್ಮ ನಾಡಿನ ಜನ ಹಾಡಿ ನಲಿಯುವಂತಾಗಲಿ ಎಂದು ಹಾರೈಸಿ ಈ ಮುನ್ನುಡಿಯನ್ನು ಮುಗಿಸುತ್ತೇನೆ.

**ಲಿಂಗರಾಜ ಕಾಲೇಜು.** Sd/ **ಡಿ. ಎಸ್. ಕರ್ಕಿ.** M.A.P.Hd.
**೨೮-೩-೫೨** Profs- Ling-Raj College Belgaum.

V. G. KULKARNI.

Thalakawadi,
**Belgaum.**
20-4-51

ಶ್ರೀ. ಕಾರಕೂನ ಸೀತಾರಾಮರಾಯರ ಕನ್ನಡ ಮತ್ತು ಇಂಗ್ಲೀಷ ಕವನಗಳನ್ನು ಓದಿ ಅವರ ಪ್ರಯತ್ನದ ಬಗೆಗೆ ವಿಸ್ಮಯವೂ ಆದರವೂ ಉಂಟಾದವು. ಶ್ರೀಯುತರ ಆಕಾಂಕ್ಷೆಯೇನೋ ಉನ್ನತವಾದುದು. ಕವನಗಳಿಗಾಗಿ ಅವರು ಆರಿಸಿಕೊಂಡ ವಿಷಯಗಳು ಉದಾತ್ತವಾದುವು. ಆ ಈ ಕವನಗಳಲ್ಲಿ ರಸಾಭಿವ್ಯಕ್ತಿ ಇನ್ನೂ ಸ್ಫುಟವಾಗಿ ಆಗಿಲ್ಲವೆಂದೇ ಹೇಳಬೇಕು. ಕೆಲವೊಂದು ಕಡೆಯಲ್ಲಿ ನಿಜವಾದ ಕಾವ್ಯದ ಬೆಳಕು ಮಿಂಚಿದಂತಾಗುತ್ತದೆ. ಕನ್ನಡ ಭಾಷೆಯನ್ನು ಕನ್ನಡ ಛಂದಸ್ಸಿನ ನಿಯಮಗಳನ್ನು ಇನ್ನೂ ಹೆಚ್ಚಾಗಿ ಅಭ್ಯಾಸ ಮಾಡಿದರೆ ಹೆಚ್ಚು ಪ್ರಯೋಜನವಾದೀತೆಂದು ಕಾಣುತ್ತದೆ.

ಒಟ್ಟಿನಲ್ಲಿ ಸ್ತುತ್ಯವಾದ ಇಂಥ ವ್ಯವಸಾಯದ ಹಂಬಲಕ್ಕಾಗಿ ಅವರು ಅಭಿನಂದನೆಗೆ ಪಾತ್ರರಾಗಿದ್ದಾರೆ.

Sd/ ವ್ಹಿ. ಜಿ. ಕುಲಕರ್ಣಿ.
Prof. of Kannada Language
Ling-Raj College
Belgaum.

# ಇನ್ನೊಂದು ಮಾತು

—:○:—

ಈ ಕಲಿಕಾಲದಲ್ಲಿ "ತಂದೆ ತಾಯಿ ಗುರು ಹಿರಿಯರ ಭಕುತಿಗೆ ಇಂಬಿಲ್ಲಾ" ಎಂಬುದು ಎಲ್ಲೆಡೆಯಲ್ಲಿ ಕೇಳಬಂದರೂ ಎಷ್ಟೋ ಸುಜೀವಿಗಳು ಇದಕ್ಕೆ ಅಪವಾದವಾಗಿ ಕಂಡುಬರುವವು. ಇಂಥ ಸುಜೀವಿಗಳಲ್ಲಿ ನನ್ನ ಪರಮ ಶಿಷ್ಯದ್ವಯರಾದ, **ಶ್ರೀ. ನಾಗರಾಜರೂ ಶ್ರೀ. ಭಾವಿ ಶಿವಮೂರ್ತೆಪ್ಪನವರೂ** ಎಂದು ಎದೆತಟ್ಟಿ ಹೇಳಲು ನನಗೆ ಸಂತೋಷವಾಗುತ್ತದೆ. ಅವರು ಈ ಕವನ ಸಂಗ್ರಹವನ್ನು ಯಾವ ಲಾಭದಾಶೆಯಿಲ್ಲದೆ ಅಚ್ಚುಹಾಕಿ ಕೊಟ್ಟಿದ್ದಕ್ಕಾಗಿ ನಾನವರಿಗೆ ತುಂಬಾ ಋಣಿ. ಅವರಲ್ಲಿ ಕೆಲಸ ಮಾಡುವ ಕಂಪೋಜಿಟರರು ಅತಿ ಹುರುಪು ಹುಮ್ಮಸ್ಸಿನಿಂದ ಅಚ್ಚಿನ ಕೆಲಸ ಶೀಘ್ರವಾಗಿಯೂ ಅಚ್ಚುಕಟ್ಟಾಗಿಯೂ ಮಾಡಿ ಕೊಟ್ಟಿದ್ದು ಶ್ಲಾಘನೀಯವು. ಇದಲ್ಲದೆ ನನ್ನ ಬಿನ್ನಹವನ್ನು ಮಾನ್ಯ ಮಾಡಿ ಮುನ್ನುಡಿ ಬರೆದು ಕೊಟ್ಟಿದ್ದಕ್ಕಾಗಿ ಶ್ರೀಮಾನ್ ಡಾ. **ಕರ್ಕಿ**ಯವರ ಮತ್ತು ತಮ್ಮ ಕೆಲಸಗಳನ್ನೆಲ್ಲ ಬದಿಗಿಟ್ಟು ತಮ್ಮ ಅಭಿಪ್ರಾಯ ಬರೆದು ಕೊಟ್ಟಿದ್ದಕ್ಕಾಗಿ ಪ್ರೋ. **ವ್ಹಿ. ಜಿ. ಕುಲಕರ್ಣಿ**ಯವರ **ಆಭಾರ** ಮನ್ನಣೆ ಮಾಡುವದು ನನ್ನ ಆದ್ಯಕರ್ತವ್ಯವೆಂದು ಭಾವಿಸಿ ಈ ಎಲ್ಲ ಮಹನೀಯರಿಗೆ ನನ್ನ ಹೃತ್ಪೂರ್ವಕ ವಂದನೆಗಳನ್ನರ್ಪಿಸುತ್ತೇನೆ.

**ಗುಳೇದಗುಡ್ಡ.**
೧೫-೮-೫೩ }

**ಎಸ್. ಬಿ. ಕಾರಕೂನ.**

# ಪರಿವಿಡಿಯು.



## Index.

# ಹರಿಃ ಓಂ ।

## ೧ ಮಹರ್ಷಿ ಅರವಿಂದ ಘೋಷರವರ ಸಂದೇಶವು.

ನನ್ನ ಜ್ಯೋತಿಯು ನಿನ್ನೊಳರಗಲಿ ನನ್ನಬಲವೇ ನಿನ್ನ ಹುಮ್ಮಸು ।
ನಿನ್ನ ಹೃದಯವ ಕಲಕದಿರಲವ ತಿತನು ತಾನೆಂದೂ ॥
ಸನ್ನುತಲ್ಲದ ಪೂರ್ಣವಲ್ಲದ ನ್ಯೂನಫಲವನು ಬಯಸಲಾಗದು ।
ಘನ್ನವಾತ್ಮವಗೊಳಪ ಮರವನು ಬಯಸು ಎಂದೆಂದೂ ॥ ೧ ॥

ನಿನ್ನದಾಗಲಿ ಒಂದೆ ಸಂತಸ ಘನ್ನದಯಪೂರಿತವು ಬಯಕೆಯು ।
ನಿನ್ನ ಪ್ರತಿಶಕ್ತಿಗಳ ನೊತ್ತುತೆ ಕುರುಡುದೈವವನೂ ॥
ಮುನ್ನತೋರ್ಪುದು ನಿಶ್ಚಲದಿ ಹೊಳೆಯುವ ಘನ್ನವಾಗಿಹದಾತ್ಮಶಕ್ತಿಯು ।
ನಿನ್ನ ಕಾಯಕ ಕರ್ಮ ಮಾಳ್ಪುದು ಫಲವ ಬಯಸದಲೇ ॥ ೨ ॥

ಘನ್ನವಾಗಿಹ ಫಲವ ನೀಡ್ವುದು ಸರುವಶಕ್ತಿಯು ಕಾರ್ಯವದು ಕೇಳ್
ತನ್ನ ಸಮಯದಿ ಪ್ರಭುವು ಸರುವವ ನಿಶ್ಚಯದಿ ತಿರುಗಿಸುವ ॥

"ಸಾವಿತ್ರಿ" ದೇವಮಾತಾ"

## ೨ ಕರ್ಮ ಕಥೆಯು

ಆವ ಕರ್ಮದಿ ವಿಧಿಯು ನಿರ್ಮಿಪ ದೇಹಗಳ ಕುಂಬಾರನೋಲ್ ।
ಆವ ಕರ್ಮದಿ ಹರಿಯು ಹತ್ತವತಾರಗಳ ತಾಂತಾಳಿದಂ ॥
ಆವ ಕರ್ಮದಿ ಹರನು ಜಗಸಂಹಾರಕರ ತಾಂ ನೆನಿಸನೊ ।
ನಾವು ಕರ್ಮಾಧೀನರೈ ನೇಸರನ ಗಗನದಿ ಚಲಿವುದೂ ॥ ೧ ॥

ರಾಮನನು ಹದಿನಾಲ್ಕು ವರುಷವ ವನಕೆಯಟ್ಟಿತು ಕರ್ಮವು ।
ಕಾಮನನು ಹರಕ್ರೋಧದಗ್ನಿಗೆ ಈಡುಮಾಡಿತು ಕರ್ಮವು ॥
ವಾಮನನು ತಾ ಬಟ್ಟುವು ವೇಷದಿ ಬಿಕ್ಕೆಬೇಡಿದ ಕರ್ಮದೋಳ್ ।
ಕಾಮಧೇನುವು ಅಗ್ವದದು ತಾ ರಾಮ ನಾಮವ ಜಪಿಸಲು ॥ ೨ ॥

ಕರ್ಮಭೂಮಿಯು ಜಗವು ನಿತ್ಯವು ಕರ್ಮದಿಂದಲಿ ಸುಖವುಮನುಜಗೆ
ಧರ್ಮಬಿಡದಲೆ ಸರ್ವಕಾಲದಿ ಕರ್ಮವನು ಆಚರಿಸೆ ॥
ಕರ್ಮಪಾಶವ ಬಿಸುಟ ನರತಾ ನಿತ್ಯಸುಖವನು ಪಡೆವ ಜಗದೊಳು ।
ಮರ್ಮವಿದನೀಂ ತಿಳಿದು ನಡೆದೊಡೆ ಸುಖಿಯು ನೀನಯ್ಯಾ ॥ ೩ ॥

ಕಂತುಪಿತ ತಾ ಕುಂತಿ ಪುತ್ರಗೆ ಕಣದಿ ಪೇಳಿದ ಕರ್ಮದಾ ।
ಕಂತೆಯನು ವಿಸ್ತರದಿ ನರನಿಗೆ ಹುರುಪುಗುಂದಿದ ಚಣದೊಳೆ ॥
ಎಂತು ಕರ್ಮವು ನರಗೆ ಬಂಧನಕಾರಿಯುಪ್ಪುದು ಜಗದೋಳೂ ।
ಸಂತತಂ ಕರ್ಮದೊಳೆ ದೇಹಿಯು ಪಡೆವನಿಹಪರ ಸುಖಗಳಾ ॥ ೪ ॥

ಕರ್ಮಯೋಗಿಯು ಕರ್ಮಚಂದನ ಸುತನು ಮೋಹನ ಗಾಂಧಿಯು ।
ಧರ್ಮದಿಂದಲೆ ನಡೆದು ಜಗದೊಳು ಕರ್ಮಮಹತಿಯ ಬೀರಿದ ॥
ನರ್ಮಮಾಡಿದ ನಾಂಗ್ಲರಾಜ್ಯದ ಶಕಟನೆತ್ತರವನ್ನು ಕೆಡಹದೆ ।
ಕರ್ಮಚಕ್ರವು ಭಾರತಾಂಬೆಗೆ ಭಾಗ್ಯಲಕ್ಷ್ಮಿಯ ತೋರಿತು ॥ ೫ ॥

ದುಷ್ಟಗ್ರಹಗಳ ಕತದಿ ಕೆಮ್ಮೈಸೆ ದುಷ್ಟನೋರ್ವನು ಶ್ರೀಷ್ಠಗಾಂಧಿಯು ।
ನಷ್ಟದಸು ಯಮಸದಕೆ ಭಾರತ ಸೌಖ್ಯವನು ಕಿಡಿಸಿ ॥
ಕೆಟ್ಟಜನಗಳು ಶ್ರೀಷ್ಠಪುರುಷರು ಪಟ್ಟಸಾಹಸವನ್ನು ಗಣಿಸದೆ ।
ಬಿಟ್ಟು ಲಜ್ಜೆಯು ತುಚ್ಛಕಾರ್ಯಕೆ ಮನಸವನೆಳಸುವರೂ ॥ ೬ ॥

ಚಿಂತೆಮಾಡಿದಡೇನು ಲಭಿಪುದು ಶಾಂತಚಿತ್ತದಿ ಕೇಳು ನಭಸೋಳು ।
ನಿಂತು ಬೋಧಿಪ ಗಾಂಧಿಕರ್ಮವ ಮಾಡಿಮುಡಿಯುಂದೂ ।
ಇಂತು ಬೋಧಿಪ ಗಾಂಧಿಮಂತ್ರವ ಪಠಿಸಿ ಭಾರತ ಪಡೆದುಧೈರ್ಯವ
ಕಂತುಪಿತಸಿಚ್ಛೆಯಲಿ ನಡೆಯುತೆ ಮುಂದೆಸಾರುವುದೂ ॥ ೭ ॥

ಇಂದು ನಮ್ಮಯದೈವಗತಿಯಿಂ ತುಂಡುಹೊಂದಿತು ನಮ್ಮ ದೇಶವು ।
ಹಿಂದು ಮುಸ್ಲಿಮರೊಂದು ಕೂಡದೆ ಕದನಗೈಯ್ಯುತಲಿ ॥
ಎಂದಿಗೂ ಪಡಗೂಡಿಬಂದಿಹ ಬಂಧುಗಳು ಹಗೆತನದಿಮುಡಿದರು ।
ಹಿಂದೆ ಯಾದುದ ಮರೆತು ಜನಗಳನೊಂದು ಗೂಡಿಪುದೂ ॥ ೮ ॥

ಚಂದ್ರ ಮಂಡಳದೊಳಗೆ ಹೊಳೆವಾ ಚಂದತಾರಕೆ ಗಾಂಧಿ ಜೋತಿಯು ।
ಹೊಂದಿನಡೆವುದು ಮುಂದೆಕೈದೀವಟಿಗೆ ನಮಗಿರಲೂ ॥
ಹಿಂದು ಮುಸ್ಲಿಮ ಕ್ರೈಸ್ತ ಬುದ್ಧರು ಬಂಧುಗಳು ತಾವೆಂದು ತಿಳಿಯುತೆ ।
ವಂದುಗೂಡಲು ಗಾಂಧಿಶಾಂತಿಯ ಹೊಂದಿ ನಲಿಯುವನೂ ॥ ೯ ॥

ನಡುಗುವಳು ಭೂಮಾತೆ ದುರುಳರ ತುಳಿತದಿಂದತಿಶಯದಿ ಜಗದೊಳು ।
ಗುಡುಗು ಮಿಂಚಿನ ತೆರದಿ ಮತ್ಸದ್ಧಿಗಳು ಸ್ವಾರ್ಥದಲಿ ॥
ಬಿಡದೆ ಬುದ್ಧಿಯ ಕಿಡಿಸಿಪಿಶ್ವದಿ ರಾಷ್ಟ್ರರಾಷ್ಟ್ರದಿ ಒಡಕುಬೀರುತೆ ।
ಸುಡುವರ್ಕೈ ಪೂರ್ವಜರುಗಳಿಸಿದ ಶಾಂತಿ ಸಾಮ್ರಾಜ್ಯ ॥ ೧೦ ॥

ಜಗವೆ ತಾನಾಗಿಹುದು ಪೂರ್ವದಿ ಕುರುಗಳಾಡಿದ ಯುದ್ಧಭೂಮಿಯು |
ಸೊಗಸಿನಿಂದಲಿ ಹರಿಯುಸಾರಥಿ ಗಾಂಧಿರೂಪದೊಳು ||
ಮೊಗವನೀಕ್ಷಿಪನರಗೆ ತಾನತಿ ಕರುಣೆಯಿಂ ಜವಹಿರಗೆ ಬೋಧಿಪ |
ಖಗದರೂಪದ ಗಾಂಧಿವಕ್ಕಿಯು ಕರ್ಮ ಮಹತಿಯನೂ || ೧೧ ||

ಹೊಂದಿಸ್ಫೂರ್ತಿಯ ಗಾಂಧಿಯಿಂ ಜವಹಿರನು ಸಮರದಿ ಧೈರ್ಯದಿಂದಲಿ |
ಮುಂದೆ ನಡೆದಿಹ ದುಷ್ಟನಿಗ್ರಹ ಶಿಷ್ಟಪಾಲನೆಗೆ ||
ಇಂದು ಕಾಶ್ಮಿರ ಕದನದೊಳ್ಪಾಕಿಗಳು ನಮ್ಮೊಡೆ ಸಂಧಿಗೈಯ್ಯಲು |
ಬಂದು ತಮ್ಮಹ ಸ್ನೇಹ ಹಸ್ತವ ಮುಂದೆ ಚಾಚುವರೂ || ೧೨ ||

ರಾಜ ಸಾಗ್ರಣಿರಜವಿ ರಕ್ಕಸ ರಾಜಸೂತ್ರವ ಶೆಳೆದು ದೊರೆಯಿಂ |
ರಾಜ್ಯದೊಳ್ಕೊಲೆ ಸುಲಿಗೆ ಪಾತಕಗೈಯ್ಯಲಾಚಣದಿ ||
ರಾಜಕಾರಣ ಕುಶಲ ವಲ್ಲಭ ಮಂತ್ರಿಕಳುಹಿದ ಸೈನ್ಯನೆರವಿಗೆ |
ರಾಜ್ಯ ಸೂತ್ರವಕೊಂಡು ಜನತೆಗೆ ಶಾಂತಿಯನು ನೀಡಿದನೂ || ೧೩ ||

ರಾಜ್ಯಮುಕುಟನು ರಾಜಹಸದನು ರಾಜಕಾರ್ಯದಿ ನುರಿತಮುದುಕನು |
ರಾಜ್ಯ ಶಕಟದ ಭಾರವನು ತಾನೆಗಹಿ ನಿಂತಿಹನೂ ||
ರಾಜ್ಯ ಸಾಮ್ರಾಜ್ಯಗಳ ನಡುವಣ ಸ್ನೇಹಬೆಳಸಲುಜಾಳನೀಡುತೆ
ರಾಜ್ಯ ದೊಳ್ಶಾಂತಿಯನು ನೆಲಿಸಲು ಸತತದುಡಿಯುವನೂ || ೧೪ ||

ಅಜದ ನಜ್ಜನು ಬಿಜ್ಜೆಪ್ರವಹಣ ನಡೆಸುತರ್ಪನು ಸರುವದಿಶೆಯುಲಿ |
ರಜವನವ ತಾನೆಂದು ಬಯುಸನು ಕರ್ಮಗುಂಗಿನಲಿ ||
ಮಝುರೆ ಮುದುಕನೆ ನಿನಗೆ ಮುಪ್ಪಿಲಿಹರೆಯುಬಂದಿದೆ ಗಾಂಧಿದಯೆಯಿಂ
ರಜತಧವಳದ ಕೀರ್ತಿ ಬೆಳಗಲಿ ನಿನ್ನಮೂಜಗದೀ || ೧೫ ||

ಬಿಳಿಮುರಪ್ಪಗಳಿಲ್ಲ ಪ್ರೇಮದಿ ಬಿಡಲು ಭಾರತ ರಾಜ್ಯಸೂತ್ರವ ।
ಕರಿಯುನಪ್ಪನು ಕೊಡಗಿನವ ಸೇನೆಗಳ ಕಡಿವಾಣಾ ॥
ವಲಿದು ಕೈಯ್ಯೊಳು ಧರಿಸಿ ನಡೆಸುವ ಸೇನೆಸಾಗವೆಂಟ್ಬುದಿಶೆಯುಲಿ ।
ಒಲವು ಕುಗ್ಗದೆ ಭೂಜಲಾಕಾಶದಲಿ ಮೆರೆಯುವನು ॥ ೧೬ ॥

ಮೋಟಿಯುಣ್ಣನ ದೈವ ತೆರೆಯಿತು ರಾಟಚಕ್ರವ ತಿರುವಿ ಬಿಡುವಿಲಿ ।
ಕೋಟಿಜನಕಾಹಾರವನು ನೀಂ ಬೆಳೆದು ಕೊಡಬೇಕು ॥
ರಾಟಸೂತ್ರದಿ ನೂಲು ತೆಗೆಯುತೆ ಮಾಟ ಮಗ್ಗದಿ ನೇಯ್ದು ವಸ್ತ್ರವ ।
ಥಾಟಸಿಂದಲಿ ಮೆರಿಸೊ ನಿನ್ನಯ ದೇಶಬಾಂಧವರ ॥ ೧೭ ॥

ಸಿಂದಿ ಶೆರೆಮೊದಲಾದ ಮಾದಕವಿಂದ. ಶಾಸನಬಂದು ಕೆಡಹುದು ।
ಬಂದ ದುಡ್ಡಿಲಿ ಸುಖದ ಬಾಳುವೆ ಜನತೆಗೈಯ್ಯುವುದು ॥
ಅಂದ ಚಂದದ ವಸ್ತ್ರಮೋಹವಿ ದುಂದು ಮಾಡದೆಹಣವನುಳಿಸುತೆ ।
ಚಂದದ ಬಾಳುವೆಯು ನಮ್ಮದು ಮುಂದೆ ಜಗವೊಳಗೇ ॥ ೧೮ ॥

ನಮ್ಮದಿದ್ದಿತು ಉಚ್ಚಸಂಸ್ಕೃತಿ ನಮ್ಮನಾಡಿದು ದೇವಬೀಡಿದು ।
ನಮ್ಮದನು ನಾವ್ಬಿಟ್ಟು ಹೆರವರ ಮೋಹಕೊಳಗಾಗಿ ॥
ನಮ್ಮದಲ್ಲದ ಒಯುಸಿ ಕುಣಿದೆವು ನಮ್ಮ ಸಂಸ್ಕೃತಿ ನಾವು ಮರೆತೆವು ।
ನಮ್ಮ ನಾಡಿಗೆ ಶ್ರೇಯತರುವದು ನಮ್ಮದೆಂದೆಂದೂ ॥ ೧೯ ॥

ನಮ್ಮನಾಯಕ ಬಾಪು ಗಾಂಧಿಯ ಕಮ್ಮತತ್ವವ ಜಗದಿಬೀರಲು ।
ನಮ್ಮನಿಮ್ಮೆಂಬಗಳ ಭೇದವು ಅಳಿದುಹೋಗುವದೂ ॥
ಬೊಮ್ಮ ನಿರ್ಮಿತ ವಿಶ್ವವೆಲ್ಲವು ಹೆಮ್ಮೆಯಿಂಮೆರೆದವುದು ಸಂತತ ।
ನಮ್ಮದಿದು ಮಾನವ ಕುಟುಂಬವು ನಿತ್ಯಶಾಶ್ವತವೂ ॥೨೦॥

## ೩ ಮದಿರೆಯ ಮಹಿಮೆಯು.

ಸುಧೆಯಂ ಪಡೆದುಂ ಮರಣವತಪ್ಪಿಸೆ ಕಡಲನುಕಡೆದರು ದಾನವದಿವಿಜರು।
ಅದರೊಳು ಪಡೆದರು ಈರೆಳು ಮಣಿಗಳ ಕುಣಿದರು ಅಗಣಿತ ಸಂತಸದಿ ॥
ಸುಧೆಯೊಂದಿಗೆ ತಾಹೊರಟಿತು ಸುರೆತಾಕುಡಿಯುತೆ ದೈತ್ಯರು ಮದಿಸಿದರು।
ಸುಧೆಯನು ಈಂಟುತೆ ಮರಣವ ತಪ್ಪಿಸಿ ಮೆರೆದರು ವಿಶ್ವದಿಬಿಡುಗಣ್ಣಿಗರೂ ॥ ೧ ॥

ಸುರೆಯಂ ಕುಡಿಯುತೆ ಕಡುಮದದಿಂದಲಿ ಆಡರಿಸಿದರು ಕೇಡನು ರಕ್ಕಸರು।
ದುರುಳರ ಕಡಿಯಲು ಕಡುತ್ವರೆಯಿಂದಲಿ ದುಡುಕಿದನವಹರಿ ಅವತರಿಸಿ ॥
ಮರುಳನುಹರಿತಾಮದಿರೆಯ ಕೊಲ್ಲದೆ ಕುಡುಕರಮರಣವ ನೊಡರಿಸಿದ।
ಸರುವರ ಕೆಡಿಸಲು ಮದಿರೆಯೆ ಮೂಲವುಕಡುನಾಶಕವದ ನರಿಯದಲೆ ॥ ೨ ॥

ಸಿಂಧಿಯೆಂಬುದದು ಮೊಲೆವಾಲ್ತಾಡದ ಬಂಧಿಸೆ ಶಾಸನ ಕುಂದನು ಹೊಂದದು।
ಅಂದಿನ ಚಣದೊಳ್ನೀರೆಯಾಗುತೆ ಬಂದು ಮೋಹಿಪುದು ಮಾನವ ಕೋಟಿಯ ॥
ಬಂದುಮೂಡೆ ಶಿರೆಯಂದೆ ಭಟ್ಟಿಯೊಳ್ನಿಂದು ಗೌಪ್ಯದೊಳ್ನಲಿಯುವದು।
ಮಂದಹಾಸದಿಂ ತಾನಭಿಸಾರಿಕೆ ಯಂದದೆ ಮನೆಮನೆತಿರುಗುವದು ॥ ೩ ॥

ಹಿಂದು ದೇಶಪಿತ ಗಾಂಧಿಯಮಂತ್ರವ ನೊಂದನರಿಯೆ ಶಿರೆ ಸಿಂದಿಗಳು।
ಕುಂದುಕೊರತೆಗಳ ಪೊಂದಿ ವಿಶ್ವದಿಂ ಕಂದಿಹೋಗಿ ಕಾಲ್ತೆಗೆಯುವವು ॥
ಇಂದುನಮ್ಮಯ ರಾಷ್ಟ್ರಶಕಟದನೊಗದಿ ಕುಂತಿಹರು ತಂದೆಯ ಸಮರು।
ಒಂದುಗೂಡಿ ಜನರೊಂದೆ ಮನದಿತಾಂ ಗಾಂಧಿತತ್ವವನು ಹರಡುವುದು ॥ ೪ ॥

ಸಿಂದಿಪೆರಿಗಳ ಬಂದು ಮಾಳ್ಪ ಹೊರೆಸಂದುದು ನಾಯ್ಕರ್ಗೆಂದೆನದೆ ।
ಮುಂದುವರೆಯುತೆ ತಮ್ಮಯ ಸೇವೆಯು ಚಂದದಿ ನೀಡಲು ತಾಸುಖವು ॥
ಬಂಧುಕುಣಿಯುವದು ಸಗ್ಗದಿ ಗಾಂಧಿಯು ಸಂದಸಂತಸವ ತಾಪಡೆದು ।
ಕುಂದುಕೊರತೆಗಳರಿಯದೆ ಬಾಳಿರಿಯೆಂದವವರಗಳ ನೀಡುವನು ॥ ೫ ॥

## ಳ ಸನ್ನಾಹರಗಳಿಯು

ಏಳಿರಿ, ಏಳಿರಿ, ಬಲು ಬೇಗ, ಬೆಳಗಾಯಿತು ಏಳಿರಿ ಬೇಗ ।
ಖೂಳರ ಭಾರವನಿಳಿವುದಕೆ, ಮೇಳಾಗಿ ನಡೆಯಿರಿ ನೀವೀಗ ।
ಬಿಳಿಯರಮದವನು ತಗ್ಗಿಸುತೆ, ಗೆಳೆಯರರವರನು ಮಾಡುತ್ತೆ ।
ತಿಳಿಸುತೆ ನಮ್ಮಯ ಸಂಸ್ಕೃತಿಯ, ಗಳಪದೆ ಮುಂದಡಿಹಾಕುತ್ತೆ ।
ಬಳವನು ನೂರ್ಮಡಿ ಹೆಚ್ಚಿಸುತೆ, ಖಳತನದಿಂದತಿ ದೂರಿರುತೆ ।
ಬಳರಹಿತರ ನೀವ್ಕಾಯುತ್ತೆ, ಬಳಯುತ ರಾಜ್ಯವ ಕಟ್ಟುತ್ತೆ ।
ಬೆಳೆಗಳ ಹೇರಳ ಬೆಳೆಯುತ್ತೆ, ಒಳಕಿಪ ಬಡತನವೋಡಿಸುತೆ ।
ತಿಳುವಿನ ಜ್ಯೋತಿಯ ಬೆಳಗುತ್ತೆ ಥಳಥಳಕೀರ್ತಿಯ ಹಬ್ಬಿಸುತೆ ।
ಹಾಳ್ವಿಸನಂಗಳ ದೂಡುತ್ತೆ, ಬಾಳನು ಸುಖಮಯ ಮಾಡುತ್ತೆ ।
ಗೋಳನು ಪೆಣ್ಗಳ ದೂರುತ್ತೆ, ಮೇಳದ ಬಾಳನು ಮಾಡುತ್ತೆ ।
ಆಳಿನ ಬುದ್ಧಿಯ ನಡಗಿಸುತೆ, ಅಳಿಯನ ಲೀವಿಲಿ ಮೆರೆಯುತ್ತೆ ।
ಆಳರಸರ ಕೃತಿ ಮರೆಯುತ್ತೆ, ಆಳಲು ರಾಜ್ಯವ ಮುಂಬರುತೆ ।
ಗಳಗಳವಳುವಿಕೆ ಕಳೆಯುತ್ತೆ, ಮಳಲಲಿ ಎಂಣೆಯ ತೆಗೆಯುತ್ತೆ ।
ಬಿಳಿಯರ ದುರ್ಗುಣತ್ಯಜಿಸುತ್ತೆ, ಎಳೆಯರ ಸದ್ಗುಣಬೀರುತ್ತೆ ।
ಘಳಲನೆ ಕಾರ್ಯವ ಮಾಡುತ್ತೆ, ತಳಮಳಸದ ಮನ ಮೆರೆಯುತ್ತೆ ।
ಕೂಳಿನ ಶಿಳಿತಕೆ ಬೀಳದಲೆ, ತೋಳನ ಸ್ವಾರ್ಥವ ಕಲಿಯದಲೆ ।
ಮೇಳಿಸಿನಡೆ ಬಾಳ್ಬೆಳಗುವದು, ಏಳಿರಿ ನಡೆಯಿರಿ ಮುಂದೀಗ ॥

## ೫ ಕಲಿಪುರುಷನ ಕಂತೆಯು

ಕಲಿಯ ಕಾಲದ ಕಂತೆಯ ಕೇಳಿರಿ ಕೂಡಿದ ಜನರೆಲ್ಲಾ ।
ಕಲಿಯು ತನ್ನಯ ತಾಂಡವ ಮಾಡಿಹ ವಿಶ್ವದೊಳೆಲ್ಲೆಲ್ಲಾ ॥ ೧ ॥

ಹುಲಿಗೆಯಂಜದವ ಇಲಿಗೆಯಂಜುವುದು ಪ್ಲೇಗದ ಭಯವಲ್ಲಾ ।
ಸುಲಿಗೆಯೆಲ್ಲೆಡೆ ಹಬ್ಬಿದೆ ನರರೊಳು ವಿಶ್ವದೊಳೆಲ್ಲೆಲ್ಲಾ ॥ ೨ ॥

ರಾಷ್ಟ್ರ ರಾಷ್ಟ್ರದ ನಡುವೆ ಹಬ್ಬುತಿದೆ ಹಗೆತನವೆಲ್ಲೆಲ್ಲಾ ।
ರಾಷ್ಟ್ರನಾಯಕರು ಸ್ವಾರ್ಥದಿ ಶಾಂತಿಯ ಕದಡುವರೆಲ್ಲೆಲ್ಲಾ ॥ ೩ ॥

ವಿಶ್ವಪಿತನ ಪರಮಾತ್ಮನ ನಂಬುವ ಜನಗಳೆ ಉಳಿದಿಲ್ಲಾ ।
ವಿಶ್ವಮೇಧದೊಳ್ಕಲೆಯುತೆ ರಕುತವ ಹರಿಸುವರೆಲ್ಲೆಲ್ಲಾ ॥ ೪ ॥

ತಂದೆತಾಯಿ ಗುರುಹಿರಿಯರ ಸ್ಮರಣೆಗೆ ಮನದೊಳಗಿಂಬಿಲ್ಲಾ ।
ಕಂಡಕಂಡಪೆಣ್ಣೊಳ್ಳೃತೆ ಗೃಹಿಣಿಯ ಮಾಪ್ಪರು ಎಲ್ಲೆಲ್ಲಾ ॥ ೫ ॥

ಧರ್ಮಗುರುಗಳೇ ಧರ್ಮದ ಛದ್ಮದಿ ಸುಲಿಗೆ ಮಾಳ್ಪರಲ್ಲಾ ।
ಕರ್ಮಮಾಡದಲೆ ಫಲವ ಬೇಡಿಪಬಂಟರೆಯೆಲ್ಲೆಲ್ಲಾ ॥ ೬ ॥

ಕಪ್ಪು ಸಂತೆಯೆ ದುಡ್ಡನು ಗಳಿಸುವ ಮಾರ್ಗವೆನಿಪುದಲ್ಲಾ ।
ಉಪ್ಪುವುಂಡವಗೆ ಮೋಸಗೊಳಿಪುದೆ ಜಾಣ್ಮೆಲಕ್ಷಣಲ್ಲಾ ॥ ೭ ॥

ದೇಶಭಕ್ತರ ಸೋಗಿಲಿ ಲಂಚವ ಪಡೆದರೆ ತಪ್ಪಲ್ಲಾ ।
ದೇಶಶೀಳುತೆ ಜನಗಳ ಕೊಲ್ವುದೆ ಪರಮ ಧರ್ಮವಲ್ಲಾ ॥ ೮ ॥

ಬಿಳಿಯ ಟೊಪ್ಪಿಗೆ ವೇಷದಿ ಜನಗಳ ಸುಲಿದರೆ ತಪ್ಪಲ್ಲಾ ।
ಸುಳಿಯನರಿಯುತೆ ಸುಳ್ಳನು ಪೇಳ್ವುದೆ ಲೋಕರೂಢಿಯಲ್ಲಾ ॥ ೯ ॥

ಕರ್ಮಯೋಗಿಯ ಗಾಂಧಿಯ ಕೊಲ್ವುದೆ ಶೂರಲಕ್ಷಣಲ್ಲಾ ।
ಮರ್ಮವಿದನು ನೀಂ ತಿಳಿದು ನಡೆದೊಡೆ ಕಲಿಯಭಯವೆಯಿಲ್ಲಾ ॥೧೦॥

## ೬ ಜಾತೀಯತೆಯು.

ಸಾತ್ವಿಕರಾಜಸ ತಾಮಸಗುಣಗಳ ತಾತ್ವಿಕವಿಧಿಯಿಂಮಿಶ್ರಣ ಮಾಡುತೆ ।
ಸಾತ್ವಿಕ ಬ್ರೊಮ್ಮನು ದೇಹಘಟಗಳ ನಿತ್ಯದಿ ನಿರ್ಮಿಸಲು ॥
ಆತ್ಮನು ನೆಮ್ಮದಿ ಪಡೆಯುತೆ ಘಟದೊಳು ವಾಸಿಸಿದೇಹಿಯುಎನಿಸುತ್ತಿ ।
ಆತ್ಮನು ಕಾಯಕವೆಸಗಲು ಬರುವನು ಜಗದೊಳು ತಾನಂದೂ ॥ ೧ ॥

ಶ್ರಮವಿಭಾಗವ ಮಾಡೀ ಗುಣಗಳ ಹೊಂದಿಸಿ ಸಿರಿರಮಣಾ ।
ಶ್ರಮದಿಂ ನಾಲ್ವರ್ಣಗಳನು ಪೇಳಿದ ಪಾಲಿಸೆ ಮಾನವರೂ ॥
ಶ್ರಮವರಿಯುತೆ ನರಕಾಯಕವೆಸಗಲು ನಿಪುಣತೆ ತಾಪಡೆದು ।
ಶ್ರಮವೆಸಿಸದೆ ತಾಬಾಳುವ ಜಗದೊಳು ಸಂತಸಪಡೆಯುತ್ತಿ ॥ ೨ ॥

ಜಾತಿಯಮೂಲವ ನರಿಯದೆ ಜನಗಳು ಸ್ವಾರ್ಥದಿರೇಗುತ್ತಿ ।
ಕೋತಿಯಂದದಿ ಕುಣಿಯುತೆ ವಿಶ್ವದಶಾಂತಿಯ ಕದಡುವರೂ ॥
ಜಾತಿಯಜಗಳದ ನಂಜಿನ ಬೀಜವನೂಳುತೆ ವಿಶ್ವದೊಳೂ ।
ಕೋತಿಮನದ ಮುಂದಾಳ್ಗಳು ಸ್ವಾರ್ಥದಿ ಜೇಳೆಯ ಬೇಯ್ಸುವರು ॥ ೩ ॥

ತಿಳಿದುನೋಡೆ ಮಾನವ ಕುಲವೆಲ್ಲವು ಮನುವಿನ ಸಂತತಿಯೂ ।
ಅಳಿದು ಪ್ರೇಮವ ತಮ್ಮೊಳು ಜಗಳವಹೂಡಿಹರೆಲ್ಲೆಲ್ಲೂ ॥
ತಳೆದು ಪ್ರೇಮವ ನಡೆದೊಡೆ ಜನತೆಯು ನಲಿವುದು ಸಂತಸದಿ ।
ತಿಳುವುಪುಟ್ಟೆ ಜನಮರೆವುದು ಜಾತಿಯ ಕಲಹವನೆಂದೆಂದೂ ॥ ೪ ॥

ತಂದೆ ತಾಯಿಗಳ ಜಾತಿಯು ಬಾರದುಮನುಜನಿಗೆಂದೆಂದೂ ।
ಒಂದೆಕಾಯಕವ ಸಂತಸಮಾಡಲು ಜಾತಿಯ ಹೊಂದುವನೂ ॥
ಹಿಂದೆ ಕೌಶಿಕನು ತಪವನುಗೈಯುತೆ ಪಾರ್ವನು ತಾನಾದ ।
ನಿಂದ್ಯಕರ್ಮದಿಂ ಪುತ್ರನ ಕುವರನು ಬೇಡನು ತಾನಾದ ॥ ೫ ॥

ಆರ್ಯ ಜನಗಳೇ ಅಲೆಯುತೆ ವಿಶ್ವದಿ ಸಂಸ್ಕೃತಿ ಬೀರಿದರೂ ।
ಬೇರೆಬೇರೆ ಋಷಿಶಿಷ್ಯರೆ ಆದರು ಜಾತಿಯ ಬಾಂಧವರು ॥
ಸಾರಿ ಹೇಳುವೆನು ನಡದಿದೆ ಬೆರಿಕೆಯು ವಿಶ್ವದೊಳೆಂದೆಂದೂ ।
ದೂರುಮಾಡುತೆ ಜಾತಿಯ ಕುರುಡನು ಬಾಳ್ವುದು ಶಾಂತಿಯಲಿ ॥ ೬ ॥

## ೭ ನಾಡಗುಡಿಯು

ಮೆರೆವುದು ಭಾರತ ಬಾವುಟವೂ, ಮೆರೆಯಿಸಿ ನಮ್ಮಯ ಕೀರ್ತಿಯನೂ ।
ತ್ಯಾಗಿಣರ ಹುಮ್ಮಸ ಹೊಮ್ಮಿಸುತೇ, ತರುತಲಿ ಸ್ವಾತಂತ್ರ್ಯವ ಜನಕೆ ॥ ೧ ॥
ಏರಿಸು ಧ್ವಜವನು ಆಗಸದೋಳ್, ತೋರಿಸು ಸ್ಫೂರ್ತಿಯ ಜಗದೊಳಗೇ ।
ಓಡಿಸು ಪರಚಕ್ರದ ಭಯವ, ಕೂಡಿಸು ಜನರನು ಧ್ವಜದಡಿಯೋಳ್ ॥ ೨ ॥
ನಾಡಿನ ಬಾವುಟ ಮೆರೆಯುತ್ತೆ, ನಾಡಿನ ಕೀರ್ತಿಯ ಹರಡುತ್ತೆ ।
ನಾಡಿನ ಹೆಜ್ಜಳ ಮೆರೆಯುತ್ತೆ, ನೋಡಿರಿ ಬಾವುಟಗೌರವವಾ ॥ ೩ ॥
ಕೂಡಿರ್ಪುದು ಮೂರ್ಬಣ್ಣಗಳಿಂ, ನೋಡಿರಿ ಬಿಳಿಯದು ನೈರ್ಮಲ್ಯ ।
ಕೂರ್ಮೆಯಲಕ್ಷಣ ಕೆಂಬಣ್ಣಾ, ನಾಡಿನ ಐಕ್ಯವು ಹಸುರಿನಲಿ ॥ ೪ ॥
ಕೂಡಿಸಿ ಮುಸ್ಲಿನು ಹಿಂದುಗಳಾ, ಮಾಡುತಲರವನು ಬಂಧುಗಳ ।
ಮಾಡುತೆ ಕಾಯಕ ನಿಮ್ಮಗಳಾ, ಮಾಡುತೆ ಮಡೆಯಿರಿ ಧ್ವಜಕಾಗಿ ॥ ೫ ॥
ಮಧ್ಯದಿ ಪೊಳೆವದಶೋಕನ ಚಕ್ರ, ಬಡತನ ನಾಶಕ ರಾಟೆಯು ಚಕ್ರ ।
ಬಿಡದಲೆಬಾಪುವು ತಿರುಪಿದಚಕ್ರಾ, ಮಡಿದನುಪೊಗಳುತೆ ಚಕ್ರವನೂ ॥ ೬ ॥
ಅಳಿಯಿರಿ ಜಾತಿಯ ವಳಜಗಳಾ, ಸುಳಿಯಲಿ ಪ್ರೇಮವು ಮನಗಳಲೀ ।
ಕಳೆಯಿರಿ ಬಳಲಿಕೆ ಬಾಧೆಗಳಾ, ಬೆಳಗಿರಿ ಸಂಸ್ಕೃತಿ ಜಗದೊಳಗೇ ॥ ೭ ॥
ತಾಳಿರಿ ಜನರೊಳು ಬಂಧುತ್ವಾ, ಕಾಳನು ಬೆಳೆಯಿರಿ ವಿಪುಲದಲಿ ।
ಖೂಳರ ಸದ್ದನು ಅಡಗಿಸುತೆ, ಬಾಳಿರಿ ಸುಖಮಯ ಬಾಳುವೆಯಾ ॥ ೮ ॥

## ೮ ಪೆಣ್ಣಿನ ಮಹಿಮೆಯು

ಆಪವೆಸಿಪುದು ನೀರು ಅದರಿಂದಳಮಾನವಕೋಟಿ ಜನಿಸಿತು ।
ಆಪಸಾಗರವಾಯ್ತು ನಾರಾಯಣ ಗಧಿಷ್ಠಾನಾ ॥
ಆದಿಯೋಳಂಡದೊಳು ಗರ್ಭಿತವಾಗಿ ಹರಿ ತಾಪವಾಧಿಯೊಳಗಿರೆ
ಆದಿಲಕುಮಿಯು ಪ್ರಕೃತಿದೇವಿಯು ಪತಿಯ ಬಳಿಸಾರೆ ॥ ೧ ॥

ಆಗಲಾಗಿ ಸಮಾಧಿ ಭಂಗವು ಆಂಡಶೀಳಿತು ಅದರೊಳಿಹ ಹರಿ ।
ನಾಭಿಯಿಂದಲಿ ಕಮಳವೆದ್ದಿತು ಮೇಲೆ ತಾನಾಗ ॥
ಆಗಜಗಿಯಿತು ಮೂಲಜ್ಯೋತಿಯು ಆಗಸದಿ ನೇಸರನಾಗಿ ಹೊಳೆಯಿತು ।
ಆದಿನಾರಾಯಣನು ತನ್ನಯ ಲೀಲೆ ಪೂಡಿದನು ॥ ೨ ॥

ಕಮಳವೊಳತ್ತು ವಿಧಿಯರೂಪದಿ ಹೊರಟ ತೇಜವು ನಾಲ್ಮೊಗವಪಡೆಯುತ ।
ಕಮಳಸಂಭವನಾಗಿ ತೋರುತ ಸೃಷ್ಟಿ ನಿರ್ಮಿಸಿದ ॥
ಪ್ರಕೃತಿಯಿಂ ಘಟಗಳನು ನಿರ್ಮಿಸಿ ಆತ್ಮರೂಪದ ತೇಜವದರೊಳು ।
ಪ್ರಕೃತಿಪೊಂದವೊಳಿರಿಸಿ ಜೀವನ ರಾಶಿ ಪುಟ್ಟಿಸಿದಾ ॥ ೩ ॥

ಪ್ರಕೃತಿರೂಪದ ಪೆಣ್ಣಿನೋಳ್ಪುರಿ ಪುರುಷರೂಪದಿ ಮಿಳಿತನಾಗಲು ।
ಪ್ರಕೃತಿ ಪುರುಷರ ಮಿಲನ ಲೀಲೆಯೆ ವಿಶ್ವವಿಸ್ತಾರಾ ॥
ಪ್ರಕೃತಿ ರೂಪದ ಪೆಣ್ಣು ಕ್ಷೇತ್ರವು ಪುರುಷರೂಪದಿ ತೇಜ ಪಡೆಯುತ ।
ಪ್ರಕೃತಪೊಳ್ಮಿಲನವೇಯೆ ಮಾನವ ಕೋಟಿ ಜನಿಸುವುದೂ ॥ ೪ ॥

ಪೆಣ್ಣು ಅಲ್ಲವೆ ನಮ್ಮಪೆತ್ತಿಹ ಮಾತೆ ಜಗದೊಳು ನಮ್ಮಪೊರೆವಳು ।
ಪೆಣ್ಣಮಹಿಮೆಯನರಿಯೆ ಪಡೆವವು ನಿತ್ಯಸೌಖ್ಯಗಳಾ ॥
ಪೆಣ್ಣುಪ್ರಕೃತಿಯರೂಪು ಶ್ರೀಹರಿ ಪ್ರಿಯಳುಯೆನಿಸಿದಳಾದಿಲಕ್ಷ್ಮಿಯು ।
ಪೆಣ್ಣನೆಂದಿಗು ಬೀಳುಗೆಡಹದೆ ನಡೆಸಿಯೆ ಜಸುಖವೂ ॥ ೫ ॥

ಪೆಣ್ಣು ಪಾರ್ವತಿರೂಪುತಾಳುತ ಬಳವಕೊಡುವಳು ನಿತ್ಯಮನುಜಗೆ ।
ಪೆಣ್ಣು ಲಕುಮಿಯ ರೂಪಿನಿಂದಲಿ ಧನವನೀಡುವಳೂ ॥
ಪೆಣ್ಣು ಸರತಿಸಯಾಗಿ ಬಜ್ಜೆಯ ಪೊಳೆಯ ಜಗದೊಳು ಹರಿಸಿಯದರಾ ।
ಹೆಣ್ಣು ಸವಿಯುತ ನರನು ಪಡೆವನು ಸೌಖ್ಯ ಇಹಪರವಾ ॥ ೬ ॥

ಪೆಣ್ಣು ಮೋಹಿನಿಯಾಗಿ ಹರಿದಾನವರ ನಾಶವಗೈದ ಪೂರ್ವದಿ ।
ಪೆಣ್ಣು ದುರ್ಗೆಯು ಕೃಷ್ಣಭಗಿನಿಯು ಜಗದಿ ಮೆರೆಯುತ್ತ ॥
ಪೆಣ್ಣು ಶಾಕಂಬರಿಯು ಭೀಕರ ರೂಪುತಾಳುತ ದುಷ್ಟರಕ್ಕಸ- ।
ರ[illegible]ಸದೆದಳು ಶಕ್ತಿಯೆನಿಸುತ ತಾಯಿ ಮಹಕಾಳೀ ॥ ೭ ॥

ಪೆಣ್ಣು ಸೀತೆಯು ಘೋರ ರೂಪವತಾಳಿ ಶತಶಿರನನ್ನು ಕೊಂದಳು ।
ಪೆಣ್ಣು ಶಾರದೆವಾದಕೆಳೆದಳು ಮುನಿಯ ಶಂಕರನ ॥
ಪೆಣ್ಣಿನಕತದಿಂದೆ ರಾಮಾನುಜನು ಯತಿವರನಾದುದವರಿಂ ।
ಪೆಣ್ಣು ಜಗದೊಳು ಮಾಡಲಾಗದ ಕಾರ್ಯ ತಾನಿಲ್ಲಾ ॥ ೮ ॥

ಸುಣ್ಣವೆನಿಪಾ ಕ್ರೈಸ್ತಧರ್ಮವ ಜಗದಿ ಹರಡಿದಯೇ ಶುಪ್ರಭುತಾ ।
ಪೆಣ್ಣು ಮೇರಿಯ ದಯದಿಮೆರೆದನು ಸರ್ವದಿಶೆಯಲ್ಲಿ ॥
ಪೆಣ್ಣಿನ ಮೋಹಕ್ಕೆ ಹೇಸುತೆ ತ್ಯಜಿಸಿ ಸಂಸಾರವನು ಗೌತಮನು ।
ಘನ್ನಮುನಿವರ ಬುದ್ಧನೆನಿಸುತೆ ಮೆರೆದ ವಿಶ್ವದೊಳೂ ॥ ೯ ॥

ಪೆಣ್ಣುಮಣಿ ರೇಝಿಯಳು ತನ್ನಯ ಬುದ್ಧಿಕೌಶಲದಿಂದಲಾಳ್ವಳು ।
ಪೆಣ್ಣುರಾಣಿಯ ನೂರಜಹನಳ ಸಮರು ಯಾರಿಲ್ಲಾ ॥
ಪೆಣ್ಣು ಮಣಿಮಾಲೆಯಲಿ ಪೊಳೆವರು ಚನ್ನೆಚನ್ನಮ್ಮಾದಿ ಸತಿಯರು ।
ಪೆಣ್ಣು ಪ್ರಾಂತವನಾಳಿ ಪೋಗಳು ಸರೋಜಳೆಂಬವಳೂ ॥ ೧೦ ॥

ಘನ್ನ ಕೀರ್ತಿಯ ಪಡೆದಹಲ್ಯೆಯ ದ್ರುಪದಪುತ್ರಿಯ ಸೀತೆ ತಾರೆಯ ।
ಚನ್ನೆಮಂದೊದರಿಯ ಸ್ಮರಣೆಯಮಾಡೆ ಪಾಪಗಳೂ ॥
ಇನ್ನುನಾಶವ ಪಡೆದು ಮನುಜನು ಸನ್ನ ಸದ್ಗತಿಪಡೆದುತಾ ನತಿ ।
ಘನ್ನಸಂತಸದಿಂದೆ ಮೆರೆವನು ನಿಯತಸಗ್ಗದೊಳೂ ॥ ೧೧ ॥

ಪೆಣ್ಣುವಿರಹಿತ ಮನೆಯು ಪಾಳ್ಗುಡಿ ಪೆಣ್ಣು ಇದ್ದೊಡೆ ಜೀವನಂದದ ।
ಪೆಣ್ಣು ಮನೆಯ ಲಕುಮಿಯೆನಿಸಳು ಸದ್ಗತಿಯ ತೋರಕಳೂ ॥
ಪೆಣ್ಣು ಮುನಿದೊಡೆ ಮಾರಿಯಾಗ್ವಳು ಪೆಣ್ಣು ಪೊಲಿದೊಡೆ ಶ್ರೀಯು-
ತವಾಗ್ವಳು ।
ಪೆಣ್ಣು ಸರುವರ ಹೆಮ್ಮೆ ಕುಲದೇವತೆಯು ಯೆನಿಸಿಹಳೂ ॥ ೧೨ ॥

ಪೆಣ್ಣು ಸನ್ಮಾರ್ಗದೊಳೆ ಇದ್ದೊಡೆ ತನ್ನ ಕುಲಕೋಟಿಯನು ಮೆರೆವಳು ।
ಪೆಣ್ಣು ಪಾಪುದ ಮಾರ್ಗ ಪಿಡಿದೊಡೆ ಹಾಳುಗೆಡಹುವಳೂ ॥
ಪೆಣ್ಣಿಗೆ ಪತಿದೇವನೆನಿಪನು ಪೆಣ್ಣು ಗಂಡನ ಮಂತ್ರಿಯೆನಿಪಳು ।
ಪೆಣ್ಣು ಬೀಳ್ದೊಡೆ ನಿಯತನರಕವು ನರಗೆ ಶಾಶ್ವತವೂ ॥ ೧೩ ॥

## ೯ ಅಭಿಸಾರಿಕೆಯು

ನಾನಭಿಸಾರಿಕೆ ಹೊರಟ್ಟಿಹೆನೂ ನಲ್ಲನಕೂಡಲು ರಾತ್ರಿಯೊಳೂ
ರಾಧೆಯು ಕೃಷ್ಣನ ಸಂಗದೊಳೂ, ಕೂಡಿದವ್ನೋಲ್ನಾ ಕೂಡುವೆನೂ ||

ಕೂಡುತೆಸಂಗವ ಸುಖವನ್ನೂ, ಪಡೆಯುವೆ ನತಿಶಯ ನಾನಿಂದೂ |
ಪಡೆಯುತೆ ಸುಖವನು ನಾನಿಂದೂ, ಮೆರೆಯುವೆ ನತಿಶಯಬಿಂಕದೊಳೂ ||

ಬಿಂಕವ ಮೆರೆಯಲು ನಾನಿಂದೂ, ಶಂಕಿಸುವುದು ಜಗಜಾರಿಣಿಯೂ |
ಶಂಕಿಪಜನರ ಕಣ್ಣೊಳಗೇ, ತೂರುವೆ ಮಣ್ಣನು ನಾನಿಂದೂ ||

ದ್ರೌಪದಿಯ್ಸೈವರ ವರಿಸಿದಳೂ, ನನ್ನಯಗಂಡರುಮೂರೆರಡೂ |
ಪತಿಯರು ದೇಹವಕೊಂಡಿಹರೂ, ಮನವನು ಕದ್ದಿಹ ನಮಾರಮಣಾ ||

ಪತಿಯರು ಮನವನು ಕಳವುದಕೇ, ಸತತದಿ ಯತ್ನವಮಾಡುವರೂ |
ಪತಿಯರ ಮೂಲೆಗೆಯೊತ್ತುತ್ತೇ, ನಡೆದಿಹೆನಲ್ಲನ ಕೂಡ್ವುದಕೇ ||

ಕಾಮನು ಕ್ರೋಧನು ಮೋಹನನೂ, ಮತ್ಸರ ಮದದಂಭಾದಿಗಳೂ |
ಪತಿಗಳು ನನ್ನನು ಶೆಳೆಯುವರೂ, ಗತಿಕಾಣದೆ ನಾಹೊರಟಿಹೆನೂ ||

ಅತಿ ದಾರುಣವಿದು ಕಾಯಕವೂ, ಪತಿಗಳ ಮೋಸವಗೊಳಿಸುವದೂ |
ಸೂಳೆಯರೋಣಿಗೆ ಹೊರಟಿಹೆನೂ, ಸೂಳರಿಯುತೆ ನಾಜಾರುವೆನೂ ||

ಖೂಳರ ಕಣ್ಣಿಗೆ ಬೀಳದಲೇ, ಜಾಳವನೊಡ್ಡುತೆ ಕುಶಲದಲೀ |
ಬಾಳಿಗೆ ಮಣ್ಣನು ಎರಚುತ್ತೇ ಗೋಳಿನ ಮಾಯವ ದೂಡುವೆನೂ ||

ಮದಿರೆಯ ಕುಡಿಯುತೆ ಮದಿಸುವೆನೂ, ಮದವೇರುತೆ ನಾಕುಣಿಯುವೆನೂ|
ಮದಿರೆಯ ಭಟ್ಟಿಯುಮನದೊಳಗೇ, ಮಧುರಿಪುವಿನ ನಾಮಾಮೃತವು ||

ಶಾಸನವಿದ ಕಾಬಂಧಿಸವೂ, ಶೋಷಿಸದಿದು ತಾದೇಹಗಳಾ |
ಈಶನ ಕೃಪೆಯಿಂದೆಲ್ಲರಿಗೆ, ತೋಷವನೀಡ್ವುದು ಸಂತತದೀ ||

ಮದಿರೆಯ ಕುಡಿಯುತೆ ಮೋಹನನೂ, ಕಡುಮುದದಿಂದಲಿ ತಾಕುಣಿವೂ|
ಭಜಿಸಿದ ಸಂತತ ಹರಿನಾಮಾ, ಭಜಿಸುತ ಸೇರಿದ ವೈಕುಂಠಾ ||

## ೧೦ ಗೀತಮ್ಮ

ಗೀತೆಯನು ಬರೆವಾಗ ಜನವಡೆಯೆ ನೀನಮ್ಮಾ |
ಗೀತೆಯೆಂಬಭಿಧಾನ ಪಡೆದೆನೀನಮ್ಮಾ ||
ಗೀತೆತಾಪ್ರಿಯಕರವು ತಾತಪರಮಾತ್ಮಂಗೇ |
ಗೀತಾಭಿಧಾನಮುಂ ಸಾರ್ಥಕ್ಯಗೊಳಿಸಮ್ಮಾ || ೧ ||

ಗೀತಮ್ಮ ಕೇಳೀಗ ಕೂಸುಸಿನಾಗಿಹೆಯೆಂದೂ ।
ಓತು ನಿನಗಾಗಿ ತಂದಿಹನು ನಿಮ್ಮಣ್ಣಾ ॥
ಗೀತೆತಿನ್ನಲಿಯೆಂದು ಸವಿಯಾದ ಹಣ್ಣುಗಳಾ ॥
ಕೊತು ತಿನ್ನಮ್ಮ ನೀ ಪಕ್ವಹಣ್ಣಾ ॥ ೨ ॥

ಕೊತು ಕೇಳ್ಳೀಳುವೆನು ಫಲಗಳ ಮಹಿಮೆಯನೂ ।
ಗೀತೆತಿನ್ನಲು ಅವಳ ರೋದನವುಯೆಲ್ಲಾ ॥
ಸೋತುಕಾಲ್ತೆಗೆಯುವದು ನಗೆ ನಿನ್ನ ಮೊಗದಲ್ಲಿ ।
ಓತು ಹೊರಹೊಮ್ಮುವುದು ಕೇಳು ಗೀತಮ್ಮಾ ॥ ೩ ॥

ಗೀತಮ್ಮ ವೇಳೆರಡು ವರುಷಗತಿಸಲು ನೀನು ।
ಕೋತುಳ್ಳ ಕುಡುಮೆಣ್ಣು ನೀನಾಗುವೀ ॥
ನೀತಿವಂತನ ನಾನು ತರುವೆ ವರನಿನಗಾಗಿ ।
ಪ್ರೀತಿಯಿಂದಲಿ ಧಾರೆಯೇರಿವೆನಮ್ಮಾ ॥ ೪ ॥

ನೀತಿವಂತನ ಪತಿಯು ದೇವನನು ಭಾವಿಸುತೆ ।
ಪ್ರೀತಿಯಿಂದಲಿ ಯವನ ಸೇವೆಮಾಡಮ್ಮಾ ॥
ನೀತಿವಂತರ ಮಗಳು ನೀನೆಂದು ಮರೆಯದಿರು ।
ಕೀರ್ತಿಯನು ತಾರಮ್ಮ ನೀನೆನ್ನ ಕುಲಕೇ ॥ ೫ ॥

ಗೀತೆಕೇಳತ್ತೆ ಮಾವರನೀನು ಸಂತತದಿ ।
ಪ್ರೀತಿಯಿಂದಲಿಯವರ ಶಿಶ್ರೂಷೆಮಾಡಮ್ಮಾ ॥
ಕೋತಿಯೆಂದದಿ ನಡೆಯೆ ಘಾತಗೊಳುವುದುನಿನ್ನ ।
ಪ್ರೀತಿಯ ಸಂಸಾರವೀ ಜಗದೊಳೂ ॥ ೬ ॥

ನೀತಿಬಿಡುತಲಿ ಗಂಡ ಕೋತಿಯಂದದಿ ನಡೆಯೆ ।
ಮಾತುಬೆಳೆಸದೆ ನೀನು ನೀತಿ ತೋರಮ್ಮಾ ॥
ಆತನ ತಂಗಿಯರ ತಮ್ಮಗಳ ಜೊತೆನೀನು ।
ಪ್ರೀತಿಯ ಕೆಳತನದಿ ಕಾಣಮ್ಮಾ ನೀನು ॥ ೭ ॥

ದಾಶದಾಸಿಯರನ್ನು ಓಕುಪಡೆದಿಹ ಸುತ್ರರ |
ನಾತೆಯಿಂದಲಿ ದಯವ ನೀತೋರಿಸವ್ವಾ ||
ಮಾತನನ್ನಿವುಗಳನು ನಡಿಸೆ ನೀ ಪಡೆವಪೆಯು |
ಖ್ಯಾತಿಯನು ಜಗದೊಳಗೆ ಶ್ರೀಪ್ತಸತಿಯೆಂದೂ || ೮ ||

## ೧೧ ದೀಪಾಳಿಯ ಕೋಟೆಯಾಟವು

ಬಸವಕ ಬಸವೆನ್ನಿರೇ, ಬಸವನ ಪಾದಕೆ ಶರಣೆನ್ನಿರೇ |
ಒಂದು ಸುತ್ತಿನ ಕೋಟಿ, ಅದರೊಳಗೊಂದು ಚಂದದ ಬಸವ || ೧ ||

ಬಸವನು ಸ್ವರ್ಗದೊಳೂ ಬೆನ್ನೊಳು ಪರಶಿವನನು ಹೊರುವಾ |
ಬಸವನಮೇಲ್ಹತ್ತಿ, ಪರಶಿವಮೂಜಗವನು ಪೊರೆವಾ || ೨ ||

ಪರಶಿವನಾಜ್ಞೆಯಲೀ, ಬಸವನು ಜನಿಸಿದ ಭೂಮಿಯಲಿ |
ಪರಶಿವನಾಜ್ಞೆಯನೂ, ಬಸವನು ಬೀರಿದ ಭೂಮಿಯಲಿ || ೩ ||

ಬಸವನು ಮಾದರಸ, ಮನೆಯೊಳು ಜನಿಸಿದಮಗನಾಗಿ |
ಬಸವನು ತಾಪೊರೆದಾ, ಪತಿತೆರ ಪಾವನ ಮಾಡುತಲೀ || ೪ ||

ಬಸವನು ಜನಿವಾರ, ಬಿಸುಟುತೆ ಜಾತಿಯ ಗೂಡಿಸಿದ |
ಬಸವನ ದಯೆದಿಂದೇ, ಭಾರತ ಜನಗೂಡಿತವೊಂದೇ || ೫ ||

ಋಷಿವರ ಬಸವಂಣಾ, ಸಂಗಮುಕ್ಷೇತ್ರದಿತಪಿಸುತ್ತೇ |
ಕೃಷಿವಲರುದ್ಧಾರ, ಮಾಡಿದ ಬಸವಜನೋದ್ಧಾರಾ || ೬ ||

ಬಸವನು ಭಕುತಿಯಲಿ, ಸಂಗನನರ್ಚಿಸಿ ನಿತ್ಯದಲಿ |
ಎಸೆದನು ಭೂಮಿಯಲಿ, ಭಕ್ತರಮಾಲಿಕೆ ಪದಕದಲಿ || ೭ ||

ಬಸವನು ತಾಹೊರಟಾ, ಮಂತ್ರಿಯ ಬಳದೇವನ ಮನೆಗೆ |
ಬಸವನ ಮೆಚ್ಚುತಲಿ, ಮಗಳನುಯಿತ್ತನು ಬಳದೇವಾ || ೮ ||

ಬಸವನ ಚಾತುರ್ಯ, ಶೆಳೆಯಿತು ಮನವನು ಬಿಜ್ಜಳನ |
ಬಸವನ ನೇಮಿಸಿದಾ, ಮಂತ್ರಿಯತಾಣದಿ ಬಿಜ್ಜಳನೂ || ೯ ||

ಬಸವನ ದಯದಿಂದೇ, ಧಾವಿಸಿ ಬಂದರು ಶರಣಜನಾ ।
ಬಸವನ ದರುಶನದೀ, ಹೊಂದಿತು ಸಂತಸ ಸೌಖ್ಯಗಳಾ ॥ ೧೦ ॥

ಬಸವನ ಪರಿಕಿಸಲೂ ಹೊರಟನು ಅಲ್ಲಮಪ್ರಭು ತಾನೂ ।
ಬಸವನ ನೋಡುತಲಿ, ತುಂಬಿತು ಹರುಷವು ಅವನಲ್ಲೀ ॥೧೧॥

ಊರೂರಿಗೆ ಬಸವಾ, ಕಟ್ಟಿದ ಮಠಗಳನೊಂದೊಂದೂ ।
ಬೇರೂರಿದ ಹಳೆಯ, ದೋಷವನೋಡಿಸಿದನು ಬಸವಾ ॥ ೧೨ ॥

ಮಠವೊಳಗಯ್ಯನಿಗೆ, ಶಿಶುಗಳನೋದಿಸೆ ವಿಧಿಸಿದನೂ ।
ಶಠರನು ದೂಡಿದನೂ, ಧರ್ಮದ ಹೋಗಿಲಿ ಮೆರೆವವರಾ ॥ ೧೩ ॥

ಅನ್ನವ ನೀಡಿಸಿದಾ, ಮಠದಲಿ ಹಸಿದಿಹ ಜನಪದಕೇ ।
ತನ್ನವರೆಲ್ಲರನೂ, ತಿಳಿಯುವ ದಾರಿಯ ತೋರಿಸಿದಾ ॥ ೧೪ ॥

ಮಾನವ ಜನವೆಲ್ಲಾ, ಮನುವಿನ ಸಂತತಿ ತಾನೆಂದೂ ।
ಬೋಧೆಯ ಮಾಡಿದನೂ, ಜನಗಳನೊಂದನುಗೂಡಿಸುತೇ ॥ ೧೫ ॥

ರಾಟೆಯ ತಿರುವುತಲೀ, ನೂಲಲಿ ಬಟ್ಟೆಯ ನೇಯುತಲೀ ।
ಥಾಟಲಿ ಮೆರೆಯುತಲೀ, ಬಾಳುವ ಥಾಟಿಯ ತೋರಿದನೂ ॥ ೧೬ ॥

ಕಾಯಕ ಕೈಲಾಸ, ವೆಂಬುವ ತತ್ವವ ಬೋಧಿಸಿದಾ ।
ನಾಯಕ ಬಸವಣ್ಣಾ, ಮಾಡದ ಕಾಯಕವೇನಣ್ಣಾ ॥ ೧೭ ॥

ಬಸವನು ಮಾಡಿದುದೇ ಬಸವನ ತಮ್ಮನು ಮೋಹನನೂ ।
ಎಸಗುತೆ ಭಾರತಕೇ, ತಂದನು ಸ್ವಾತಂತ್ರ್ಯದ ಲಕುಮಿ ॥ ೧೮ ॥

ಬಸವನು ಮೋಹನರೂ, ಸೇರುತೆ ಪರಶಿವ ಸಾನ್ನಿಧ್ಯಾ ।
ಎಸೆವರು ದಿಟ್ಟಗಳಾ, ನಮ್ಮೊಳು ಪ್ರೇಮವ ಬೀರುತಲೀ ॥ ೧೯ ॥

ಬಸವನ ತತ್ವಗಳಾ, ಜನಗಳು ಪಾಲಿಸೆ ಸಂತತದೀ ।
ಬಸವನು ಮೋಹನರೂ, ಮಾಳ್ಪರು ತಾಂಡವ ನೃತ್ಯಗಳಾ ॥ ೨೦ ॥

ಬಸವಕ ಬಸವೆನ್ನಿರೇ, ಬಸವನ ಪಾದಕೆ ಶರಣೆನ್ನಿರೇ ।

# ೧೨ ಗಿಳಿಯು

ಹಸಿರು ಬಂಣದಿಂದೆಸೆಯುತೆ ಪಕ್ಕವ ।
ಪಸರಿಸಿ ಗಿಳಿಹಾರಾಡುವುದೂ ॥
ಹೊಸಗಾಲದ ಗಿಳಿ ಹುಸಿಯನು ಪೇಳದು ।
ಹಸುಮಕ್ಕಳ ಮನ ಶೆಳೆಯುವುದೂ ॥ ೧ ॥

ಹಸಿರು ಬಂಣದಿಂದೆಸೆಯುವ ವೃಕ್ಷದಿ ।
ಸಸುನಗುತಲಿ ತಾ ಕೂರುವುದೂ ॥
ಹಸಿವನೀಗಿಪುದು ಫಲಗಳ ತಿನ್ನುತೆ ।
ಹೊಸಮನದಲಿ ತಾ ಹಾರುವುದೂ ॥ ೨ ॥

ಕೆಂಪು ಬಂಣದ ಚುಂಚುವಚುಚ್ಚುತೆ ।
ಸಂತಸದಲಿ ಫಲಭಕ್ಷಿಪುದು ॥
ಕೆಂಪು ವರ್ಣದಿಂ ರಂಜಿತ ಹೃದಯದ ।
ಸಂಪಸು ಜನರಿಗೆ ತೋರುವುದೂ ॥ ೩ ॥

ಹಸಿರುಬಂಣದಿಂ ದೆಸೆಯಲಿ ಭೂಮಿಯು ।
ಸಸಿಗಳು ಬೆಳೆಯಲಿ ಸಂತತದಿ ॥
ಹಸುಗಳು ಹಾಲನು ಕರೆಯಲಿಯೆನ್ನುತೆ ।
ಉಸಿರುವುದದು ತಾ ಸಂತಸದೀ ॥ ೪ ॥

ನೀಲಮೇಘಮಂಡಳದೊಳು ಹಾರುತೆ ।
ಕಾಲನಗತಿಯನು ಅರಿಯುವುದೂ ॥
ಸೂಳನರಿತು ನಡೆವೊಡಿಸುವನು ನರ ।
ಕೇಡನು ಯೆಂದದು ಭೋಧಿಪುದು ॥ ೫ ॥

ಕಂಡ ಕಂಡಕಡೆ ಹಾರಲು ಬಯಸದು ।
ಅಂಡಜವದು ತಾನಾಗಸದಿ ॥
ನಿಂತು ಭೋದಿಪುದ ಹಂಸೆಯಮಂತ್ರಭೂ- ।
ಮಂಡಳದೊಳ್ಜನ ಪಾಲಿಸಲು ॥ ೬ ॥

ರಾಮ ರಾಮ ಹರಿರಾಮ ನೆನ್ನುತಲಿ ತಾ ।
ರಾಮ ಭಕುತ ನಾರದನಂತೆ ॥
ರಾಮ ಭಜನೆಯನು ಸಂತತಮಾಡುತೆ ।
ಕಾವಿ ತ ದಿಶೆಯಲಿ ಹಾರುವದು ॥ ೭ ॥

ಮುಗಿಲಿನೊಳಗೆ ತಾಹಾರುತಲಿರ್ಪರು ।
ಹಗಲಿರುಳೆನ್ನದೆ ತನ್ನನುನಾ ॥
ಖಗವಾಹನನೊಳ್ಳಿಟ್ಟು ಮನುಜಗೆ ।
ಮಿಗಿಲೆನಿಪಾಶಿಶ ನೀಡುವುದು ॥ ೮ ॥

## ೧೩ ಕುಟ್ಟುವ ಪದವು

ನೆಲ್ಲ ಕುಟ್ಟೋಣ ಬಾರೆ, ತಂಗಿ ನೆಲ್ಲ ಕುಟ್ಟೋಣ ಬಾರೆ ।
ಗೊಳ್ಳತೆಗೆಯೋಣ ಬಾರೆ, ನೆಲ್ಲ ಥಳಿಸೋಣ ಬಾರೆ ॥ ಪಲ್ಲ ॥

ನೆಲ್ಲಿನತಂಯರ್ಾಮಿ, ತಾನಿಹುದು ಅದರೊಳಕ್ಕಿ ।
ನೆಲ್ಲ ಥಳಸಲಕ್ಕೀ, ಕಾಣುವುದು ಗೊಳ್ಳದೂರೀ ॥ ೧ ॥

ಗೊಳ್ಳು ಜಗದಮಾಯಾ, ಅದರೊಳಕ್ಕಿಯಾತ್ಮತೇಜಾ ।
ಜೊಳ್ಳುಮಾಯೆ ಪೋಗೆ, ಪೊಳೆವುದಾತ್ಮ ತೇಜಾ ॥ ೨ ॥

ಪೊಳ್ಳುದೇಹ ಮಾಯಾ, ಅದರೊಳಿರುವ ನಂತರಾತ್ಮಾ ।
ಜೊಳ್ಳು ಮಾಯೆದೂಡೆ, ಪೊಳೆವನಂತರಾತ್ಮಾ ॥ ೩ ॥

ಕೊಲ್ಲೆ ಗಾಂಧಿ ದೇಹಾ, ಅದರೊರ್ದ ದಿವ್ಯತೇಜಾ ।
ಸಲ್ಲಿತಾಗ ಬೇಗ, ನಿತ್ಯ ಪರಾಂಧಾಮಾ ॥ ೪ ॥

ಕೊಲ್ಲೆ ಕೊಲೆಗಳಿಲ್ಲಾ, ನಡೆವುದೆಲ್ಲಾ ಜಗದಮಾಯಾ ।
ಕೊಲ್ಲೆ ನರನದೇಹಾ, ಕೊಲ್ಲಲಾರನಾತ್ಮಾ ॥ ೫ ॥

ಫುಲ್ಲನಯನ ಕೃಷ್ಣಾ, ಗೀತೆ ಕಣದಿ ಪೇಳ್ದನಾಗ ।
ಮಲ್ಲನರಗೆ ಜೀವಾ, ನೆಲ್ಲಪ್ರಾಯವೆಂತಾ ॥ ೬ ॥

# ೧೪ ಭಿಕ್ಷುಕನು

ಕುಂಬಳ ಸೊಟ್ಟೇಕೈಯೊಳು ಪಿಡಿದು ನಡುವಿಗೆ ಲಂಗುಟಪಟ್ಟೆಯು ಬಿಗಿದು।
ಕುಂಬಳರಾಜನ ಪಟ್ಟಣದೊಳಗೆ ನಡೆದನು ತಾಜೋಗಿ ॥ ೧ ॥

ಉಂಬಳಿ ತನಗೆ ಮೂಜಗವಾಗೆ ತಿಂಬುವ ಅನ್ನದ ಕೊರತೆಯು ನೀಗಿ ।
ತುಂಬಿದ ಊರೊಳು ಜನಮನ ಪರಿಕಿಸೆ ನಡೆದನು ತಾಜೋಗಿ ॥ ೨ ॥

ಭಿಕ್ಷೆಯ ಬೇಡಲು ಬಂದಿಹೆನಮ್ಮಾ ಮಾತ್ಸರವಿರದಿರೆ ಭಿಕ್ಷೆಯ ನೀಡು ।
ತುಚ್ಛರ ಮನೆಯ ಭಿಕ್ಷೆಯ ನೆಂದಿಗೂ ಗ್ರಹಿಸೆನು ನಾನಿಂದೂ ॥ ೩ ॥

ಮನೆಯಜಮಾನನು ನೈಮಾರಿ ದುಡಿದುಂ ಹೊಲದೊಳು ಧಾನ್ಯವ ಬೆಳೆದಿರೆ ನೀ ।
ನನುನಯದಿಂದಲಿ ನೀಡಲು ಭಿಕ್ಷೆಯ ಗ್ರಹಿಸುವೆ ಪ್ರೇಮದಲಿ ॥ ೪ ॥

ಮಾನಸ ಶ್ರಮವನು ಮಾಡುತೆ ನಿನ್ನಯ ಪ್ರೇಮದಪತಿ ಧನಗಳಿಸುತಿರೆ ।
ದಾನವ ಭಕುತಿಲಿ ಮಾಡಿದೊಡದನನು ಸಾನಂದದಿನಾಂ ಕೊಳ್ಳುವೆನೂ ॥ ೫ ॥

ಅನ್ನದ ವಸ್ತ್ರದ ಕೊರತೆಯನರಿಯೆನು ನನ್ನಯುಗೆಳೆಯುವ ಧನಪತಿಯು ।
ಚೆನ್ನಮನದಿನೀ ನೆನ್ನೊಳು ನೀಡುವ ಭಕುತಿಯ ಭಿಕ್ಷೆಯ ಕೊಳ್ಳುವೆನು ॥ ೬ ॥

ಜಾತಿ ವಿಜಾತಿಯು ಭೇಧವ ನೆರಿಯೆನು ಪ್ರೀತಿಯಿಂದೆ ನೀ ಭಿಕ್ಷೆಯನೀಡಲು।
ಓತುಹರಿಸುವೆ ನಖಂಡಸು ಮಂಗಲೆಯಾಗುತೆ ನೀ ಪೊಳೆಯೆಂದೂ ॥ ೭ ॥

ಪೆಣ್ಣನು ಪೊರೆವೆನು ಪತಿರೂಪದಿ ನಾಥನ್ಸದಾಶಿವ ಮೂರುತಿಯು ।
ಇನ್ನು ಜನಗಳ ಪಾಲಿಪೆ ತಂದೆಯ ರೂಪದಿ ಶ್ರೀಹರಿ ವಿಶ್ವಾತ್ಮಾ ॥ ೮ ॥

ಸಂಣಮಕ್ಕಳರೂಪದಿ ಪೊರೆವಳು ಎನ್ನಯಸತಿಜಗದಂಬೆ ।
ನಿನ್ನಯ ಅತಿಥಿಯ ರೂಪದಿ ಬಂದಿಹೆ ಜಗದೊಳು ನಾನಿಂದೂ ॥ ೯ ॥

ಸನ್ನುತ ಬಿಜ್ಜೆಯ ವಿತರಣ ಕಾರ್ಯವ ಸರಸತಿರೂಪದಿ ಮಾಡುವೆನೂ।
ಇನ್ನುನಾನು ಮಾಡದ ಕಾಯಕವದು ಜಗದೊಳಗೇನುಂಟು ॥ ೧೦ ॥

ಕಪ್ಪು ಸಂತೆಯಿಂ ಜನಗಳು ದುಡ್ಡನು ಗಳಿಸುವರೆಂಬ ದೂರನುಕೇಳುತೆ ।
ತಪ್ಪನು ತಿದ್ದಲು ಜಗದಲಿ ಬಂದಿಹೆ ಜೋಗಿಯ ವೇಷದಲಿ ॥ ೧೧ ॥

ಪಕ್ಕಲಿಗರು ತಾ ರೊಕ್ಕವಳಿಶಿಲಿ ಹೊಲಬೀಳ್ಗಿಡಹುತೆ ಪೀಡಿಪತೊಡೆಯು ನ।
ಬೊಕ್ಕ ಭೂಮಿಯನು ಮಾಡುತೆ ಬೆಳೆಯಲು ಬುದ್ಧಿಯ
ಹೇಳುವೆನೂ ॥ ೧೨ ॥

ಚಿಕ್ಕಮಕ್ಕಳು ಬಸವಮೋಹನರು ಜಗದಿ ಮಾಡಿದ ಬೋಧೆಗಳಾ ।
ಚೊಕ್ಕಮನದಿ ಜನ ತಿಳಿದು ನಡೆದೊಡೆನಾನಲಿವೆನು ಸಂತಸದಿ ॥ ೧೩ ॥

ಶಿವಾ ಮಾದೇವಾ ನಾನೇ ಶಿವಾ ನೀತಿಗೆಟ್ಟವಗೆಎಲ್ಲಿ ಶಿವಾ ॥

# ೧೫ ಮನಗಳ್ಳನು

ಹಿಡಿಯಿರಿ, ಹಿಡಿಯಿರಿ, ಕಳ್ಳನಹಿಡಿಯಿರಿ, ಯೆನ್ನಯಮನ ಕದ್ದೋಡುತಿಹ।
ತಡೆಯಿರಿ ಅವನನು ಬಂಧಿಸಿಕೆಡಹಿರಿ ನಿಮ್ಮಯ ಮನದ ಬಂದಿಯಲಿ ॥೧॥
ಎಂದಿಗು ಕಳ್ಳನು ಗೊಲ್ಲಬಾಲನಿವ ಗೋಪಿಯ ಬೆಣ್ಣೆಯ ಕದ್ದಿಹನೂ ।
ತಂದೆಯ ಮನೆಯಲಿ ಗೊಂದಲವೆಬ್ಬಿಸಿ ಸರುವರಮನವ ತಾ ಕೆಳೆದಾ ॥೨॥
ಮಾವನ ಕಂಸನ ಮೇಲಣ ಮೋಹವ ಬಿಸುಟುತ ಲಟ್ಟದಯಮಪದಕೆ ।
ಕಾಮನಪಿತ ತಾ ಮೋಹಿತ ಭಕುತಗೆ ಕಾಮಿತಫಲಗಳ ನೀಡುವನೂ ॥೩॥
ಸಣ್ಣವನಿರೆ ತಾ ಮಣ್ಣತಿಂದನೆಂದಣ್ಣನು ಜನನಿಗೆ ಪುಸಿನುಡಿಯೆ ।
ತನ್ನಬಾಯತೆರೆದೋರಿದ ಜನನಿಗೆ ವಿಶ್ವದ ವಿಸ್ತರವದರೊಳಗೇ ॥೪॥
ತುಂಟಗಳ್ಳನಿವ ತಂಟೆಯೊಡ್ಡುವ ಸಂತತ ದುರ್ಜನ ಪಥದೊಳಗೇ ।
ಗಂಟೆಚವಡಿಯಿವ ಭಕ್ತಿಯಗಂಟನು ಸಂತತಕದಿಯುವ ಜಗದೊಳಗೆ ॥೫॥
ತನ್ನಮನೆಯದು ದೂರವಿರುತಿರೆ ಸರುವರ ಮನದಲಿ ತಾ ಸುಳಿವ।
ತನ್ನಯ ಭಕುತರ ನಿಲ್ಲಿಡದಲೆ ತಾ ತನ್ನೆಡೆ ಸಂತತ ಶೆಳೆಯುವನು ॥೬॥
ಕಾಟವನಿವನ ತಪ್ಪಿಸೆ ಪೋಗಲು ಸೋಟತನವ ನಾನಾಶ್ರಯಿಸೆ ।
ನಾಟಕಿಯಿವ ತಾಮುಂದೆ ಸುಳಿಯುತೆ ಬಗ್ಗಿಪನೆನ್ನಯ ಮನವನ್ನೂ ॥೭॥
ಸಂಭಾವಿತೆಯನು ನಟಸುತೆಪೋದನು ಸಂಧಿಯ ಗೈಯ್ಯಲು ಕೌರವನಡೆಗೆ।
ಸಂಧಿಮುರಿಯಲವ ಕಟ್ಟದ ಟೊಂಕವ ಕೌರವಮುದ ತಾನಿಳಿಸಲ್ಕೆ ॥ ೮ ॥

ಪಾರ್ಥನ ಮೇಲಣ ಪ್ರೇಮದಲವ ತಾ ಸಾರಥಿಯಾಗುತೆ ಯುದ್ಧದಲಿ।
ಪಾರ್ಥಗೆಗೆಲುವನು ತಂದನು ಕೊಲ್ಲುತೆ ಪೋಸದಿರಿಪುಗಳಸೈನ್ಯಗಳ॥೯॥
ನಿಂದ್ಯಕರ್ಮ ತಾನೆಂದಿಗು ರುಚಿಸದು ನಮ್ಮಿ ಕಳ್ಳಗೆ ಜಗದೊಳಗೆ।
ಕಂದನೆಂದು ತಾನಪ್ಪುವ ಜನಗಳ ಹೊಂದಲು ತನ್ನಡಿ
ಭಕುತಿಯಲಿ ॥ ೧೦ ॥

# ೧೬ ಮದಿರಾ ದೇವಿಯ ಉತ್ತರ ಪೂಜೆಯು

ಜಯಮದಿರೆ, ಜಯಮದಿರೆ, ಜಯಮದಿರಾದೇವಿ ಜಯಮದಿರಾದೇವಿ
ಆರುತಿಬೆಳಗುವೆ ಆನಂದೇಶ್ವರೀ, ಆನಂದೇಶ್ವರೀ ॥ ಪಲ್ಲ ॥
ನಿನ್ನಯ ಬಲಿಯೊಳು ನರನೊಮ್ಮೆ ಸಿಗಲೂ, ನರನೊಮ್ಮೆ ಸಿಗಲೂ ।
ನಿನ್ನಯ ಶಿರೆಯೊಳಮಾಡುವಿಯವನಾ, ಮಾಡುವಿಯವನಾ ॥ ೧ ॥
ಹೆಂಡರು ಮಕ್ಕಳ ದೂರುತಲವನೂ, ದೂರುತಲವನೂ ।
ನಿನ್ನಡಿಧ್ಯಾಸಿಪ ತಾನತಿತ್ವರದೀ, ತಾನತಿತ್ವರದೀ ॥ ೨ ॥
ಕ್ಷೀರಸಾಗರದೊಳು ಜನ್ಮವತಾಳಿ, ಜನ್ಮವತಾಳಿ ।
ಸಾರಹೀರುತೆ ನೀನು ರಕ್ಕಸರಕೊಂದಿ, ರಕ್ಕಸರಕೊಂದಿ ॥ ೩ ॥
ತಾಡರಸವಾಗಿನೀ ಮರುಳುಗೊಳಿಸುವಿ, ಮರುಳುಗೊಳಿಸುವಿ ।
ತಾಂಡವಜನರಿಗೆ ಮಾಡಹಚ್ಚುವಿ, ಮಾಡಹಚ್ಚುವಿ ॥ ೪ ॥
ಶಾಶನಬಂದಿಸೆ ನೀರೆಯಾಗುತಲೀ, ನೀರೆಯಾಗುತಲೀ।
ಆಚಣ ದೂರೋಳು ಬಂದುಕುಣಿಯುವಿ, ಬಂದುಕುಣಿಯುವಿ ॥ ೫ ॥
ಭಟ್ಟಯೊಳ್ನಿಲ್ಲುತೆ ಮದಿರೆಯುಳಗಿ, ಮದಿರೆಯುಳಗಿ ।
ಭಟ್ಟರ ಮನೆಯೊಳು ಮೆಲ್ಲನೆಜಾರಿ, ಮೆಲ್ಲನೆಜಾರಿ ॥ ೬ ॥
ನಿನ್ನಮಹಿಮೆಯ ನೀನುವಿಶ್ವದಿಮೆರೆವಿ, ವಿಶ್ವದಿಮೆರೆವಿ ।
ನಿನ್ನಮುಟ್ಟದ ಜನರ ನೀನಳಿದುಬಿಡುವಿ, ನೀನಳಿದುಬಿಡುವಿ ॥ ೭ ॥
ನ [illegible] ಂಧಿಯು ನಿನಗೆ ಅಳಿಗಾಲತಂದಾ, ಅಳಿಗಾಲತಂದಾ ।
ಇ[illegible] ರತದೊಳು ಇಂಬಿಲ್ಲನಿನಗೆ, ಇಂಬಿಲ್ಲನಿನಗೆ ॥ ೮ ॥

# ೧೭ ಜೀವನ ಯಾತ್ರೆಯು

ಜಗವುತಾನಿದು ರಂಗಭೂಮಿಯು ನರನುಅದರೊಳುವಿವಿಧ ಪಾತ್ರವ ।
ವಹಿಸಿ ತನ್ನಯ ಕಾರ್ಯವೆಸಗುತೆ ಮರಳಿ ಪೋಗುವನು ॥ ೧ ॥

ಮೊದಲು ತಾನವ ಶಿಶುವು ರೂಪವಧರಿಸಿ ತನ್ನಯ ಕೇಳಿಯಿಂದಲಿ ।
ತಣಿಪತನ್ನಯ ಜನನಿ ಜನಕರಮನವ ತಾನಾಗ ॥ ೨ ॥

ವರುಷವಾರೇಳುಗಳು ಗತಿಸಲು ಶಾಲೆಯೋದುವ ಬಾಲನೆನಿಸುತೆ ।
ಪರುವಕಾಲದಿ ತುಂಟನೆನಿಪನು ಶಾಲೆಯೊಳು ಮನೆಯೊಳಗೆ ॥ ೩ ॥

ಓದುಮುಗಿಯಲಃ ಜಗದಿ ತನ್ನಯಸಮಾನಪಂಡಿತನಾವನೆನ್ನುತೆ ।
ಮೋದು ಮೆರೆವಾಗೂಳಿಯಂದದಿ ಕೊಬ್ಬಿಮೆರೆಯುವನೂ ॥ ೪ ॥

ಸಂದಪ್ರಾಯದಿಕಾಲನಿಡೆ ತಾಸುಂದರಾಂಗಿಯ ಸಂಗಬಯಸುತೆ ।
ತಂದು ವೊಬ್ಬಳನಾಳ್ಪತನ್ನಯ ಮನೆಯ ವೊಡತಿಯನೂ ॥ ೫ ॥

ಗಂಡ ಹೆಂಡಿರ ಸಂಗಫಲದಿಂ ಸುಂದರಾಂಗನು ಸುತನು ಜನಿಸಲು ।
ತಂದೆತನವನು ಪಡೆದು ಜಗದೊಳು ಸಂದುಮೆರೆಯುವನೂ ॥ ೬ ॥

ಸಂದಪ್ರಾಯವು ಗತಿಸಲಾಗ ಮುಪ್ಪಿಕಾ ತಲೆದೋರುತಿರೆ ತಾ ।
ಹೊಂದಿ ಸುಖದುಃಖಗಳ ಅನುಭವಹಿರಿಯನೆನಿಸುವನು ॥ ೭ ॥

ಮಂದಿ ಮಕ್ಕಳನಡುವೆ ತಿರುಗುತೆ ಚಂದವಾಗಿಹ ಬುದ್ಧಿ ಪೇಳ್ವನು ।
ಕುಂದುವನು ಮನದೊಳಗೆ ಹಿಂದಿನಪ್ರಾಯನೆಯುತಲಿ ॥ ೮ ॥

ಮುಪ್ಪುಬರಲವ ಬೆದರಿನಂವದಿ ರಕ್ತಮಾಂಸಾದಿಗಳ ವಿರಹಿತ ।
ಕಪ್ಪುಬಡೆದ ಚಿಪ್ಪು ಮುದ್ರೆಯ ಮುಖದಿ ತೋರುವನೂ ॥ ೯ ॥
ಕಿವುಡು ಕಿವಿಯಿಂ ಕುರುಡುಕಣ್ಣಿಂಬಚ್ಚಬಾಯಿಂ ಬೋಳುತಲೆಯಿಂ ।
ನಡುವುಬಾಗಿಲಿ ಕಲಿಯ ಕಾಲದ ಹನುಮನೆಂತವದೋರುವಂ ॥ ೧೦ ॥
ಆದೊಡಂ ತಾನ್ಹರಿಯ ಸ್ಮರಿಸದೆ ಸತಿಸುತರ ದುಡ್ಡಿನ ಸ್ಮರಣೆಗೈಯುತೆ ।
ಕಾದುಕೊಂಡಿಹ ಮರಣ ಮರೆಯುತೆ ಮೌರ್ಖ್ಯದಲಿ ಮುಳಗುವನು ॥ ೧೧ ॥
ಪ್ರಾಣವಕ್ಕಿಯು ಹಾರಲವ ತಾ ಶೂನ್ಯನಾಗುತೆ ಪಂಚಭೂತದಿ ।
ಕೂಡಿ ಮಣ್ಣೊಳು ಮಣ್ಣು ಆಗುತಲಳಿದು ಹೋಗುವನೂ ॥ ೧೨ ॥

# ೧೮ ಅಂಬಿಗನು.

ಆರುಜನರಿವರರಿಗಳೆನ್ನಯ ಬೆನ್ನು ಹತ್ತಿರೆ ನಾನು ಬಯಸುವೆ ।
ಪಾರುಗಾಣುತಲವರ ಹಸ್ತದಿ ದೂರ ಪೋಗ್ವುದಕೇ ॥
ಪೂರವಾಣ ನಾನೆಂತು ದಾಟುವೆ ಘೋರವಾದೀ ಭವದ ಸಾಗರ ।
ತೋರು ದಾರಿಯು ನನಗೆ ನಿನ್ನಯ ಬೆಳಕು ತೋರುತಲಿ ॥ ೧ ॥

ಹಣ್ಣುಮಾಡಿಹರಿವರು ನನ್ನನು ಕಂಡಕಂಡಡೆ ಪೀಡಿಸುತ್ತಲಿ ।
ಪೆಣ್ಣುಯೆನ್ನುವ ಕರುಣೆಯಿಲ್ಲದೆ ಪೊಡೆವರೆನ್ನನ್ನೂ ॥
ಕಣ್ಣುಕಾಣದ ಕುರುಡಿಯಾಗಿಹೆ ಮಣ್ಣುಬೀಳಲಿ ಇವರ ಬಾಯೊಳು ।
ಸಣ್ಣಗಾಗಿಯೆ ಅರೆಯುತಿರ್ಪರು ಸತತ ನನ್ನನ್ನು ॥ ೨ ॥

ಅಂಬಿಗಪ್ಪನೆ ಬೇಡಿಕೊಳ್ವೆನು ಪಾರುಮಾಡೆಲೊ ಯಿವರ ಕೈಯ್ಯಿಂ ।
ನಂಬಿಬಂದಿಹಳನ್ನು ಕಾಯ್ವುದು ಧರ್ಮನಿನಗಲ್ಲೇ ॥
ತುಂಬಿದ ಸಾಗರದ ತೀರದಿ ನಿಂತುಕೊಂಡಿಹೆ ಗತಿಯು ಕಾಣದೆ ।
ಅಂಬರೀಷಗೆ ಮುಕುತಿಯಿತ್ತಿಹ ಹರಿಯೆ ಕಾಯನ್ನ ॥ ೩ ॥

ಹುಟ್ಟನಿಂದಲಿ ನೀರ ಕಡಿಯುಲೊ ಸುಟ್ಟುವೋರೆಯರಿವರ ತಪ್ಪಿಸೋ ।
ಶ್ರೇಷ್ಠನಾವಿಕ ನೆನಿಸಿಕೊಂಬೆಯೊ ನೀನು ಜಗದೊಳಗೇ ॥
ಪುಟ್ಟಸೀರೆಯು ಪರಿವೆಯಿಲ್ಲದೆ ಕಷ್ಟಬಡುತಲಿ ಓಡಿ ಬಂದಿಹೆ ।
ಕಷ್ಟನಳಿಯುತೆ ಶ್ರೇಷ್ಠಪದವಿಗೆ ಮುಟ್ಟಿಸೆನ್ನನ್ನೂ ॥ ೪ ॥

ಮೀನವಾಗುತೆ ಹೀನದೆಸೆಯೊಳು ಗ್ಲಾನಿಗೊಳ್ಳುತೆಬಿದ್ದ ಕಾಲಕೆ ।
ಮಾನವರ ರಕ್ಷಣೆಯ ಮಾಡಲು ಮತ್ಸ್ಯ ನೀನಾದಿ ॥
ದೀನರಕ್ಷಕ ಭೂರಮೆಯನೀಂ ಪೆತ್ತು ಬೆನ್ನೊಳು ಪಾರುಮಾಡಿದಿ ।
ಕೂರ್ಮರೂಪದಿ ಹರಿಯೆ ನಾರಾಯಣನೆ ಭಗವಂತಾ ॥ ೫ ॥

ಹಂದಿರೂಪದಿ ಚಂದದಿಂದಲಿ ಮುಂದಿ ಸಹಿತವೆ ಭೂರಮೆಯನೀ ।
ಹಿಂದಕೆತ್ತಿದೆ ಕೋರೆಯಿಂದಲಿ ಜಗವನುದ್ಧರಿಸೆ ॥
ಅಂದು ನಿನ್ನೀಸಾಹಸವ ಮೆಚ್ಚುತೆ ಚಂದ ಪೂಗಳವೃಷ್ಟಿಗೈದರು ।
ತಂದೆ ಹರಿಯೆ ಭಾಪುಯೆನ್ನುತೆ ಸಂದದಿವಿಜಗಣಾ ॥ ೬ ॥

ದುಷ್ಟ ರಕ್ಕಸನನ್ನು ಶೀಳಲು ಶ್ರೇಷ್ಠ ನರಹರಿ ರೂಪಿನಿಂದಲಿ ।
ನೆಟ್ಟನೆ ಹೊರಬಿದ್ದು ಬಂದಿಯೊ ಶೀಳಿಕಂಬವನೂ ॥
ಅಟ್ಟರಕ್ಕಸನನ್ನು ಯಮಸದನ ಕಾಗಕಾಯ್ದಿಯೊ ನಿನ್ನ ಭಕ್ತನ ।
ಶ್ರೇಷ್ಠ ಪ್ರಲ್ಹಾದನನು ನಿನ್ನನು ಮೊರೆಯ ಹೊಕ್ಕವನ ॥ ೭ ॥

ಕುಳ್ಳ ವಾಮನನಾಗಿ ಬರುತಲಿ ಬಿಕ್ಕೆ ಬೇಡುತೆ ಮೂರುಪಾದವ ।
ಮಳ್ಳುವಮಾತಿಲಿ ದಾನ ಬೇಡುತೆ ಬಲಿಯ ವಂಚಿಸಿದೀ ॥
ಸುಳ್ಳು ಬೀಳವ ಭಕ್ತ ಬಲಿಯೊಳು ಮೆಚ್ಚಿಕಾಯ್ದಿಯೊ ಗದೆಯಪಿಡಿಯುತೆ ।
ಪೊಲ್ಲೆಸನ್ನದಲವನ ಬಾಗಿಲು ಪಾತಾಳದಲಿ ನೀನೂ ॥ ೮ ॥

ಕಾರ್ತವೀರ್ಯನು ತಂದೆ ಜಮದಗ್ನಿಯನು ಪೀಡಿಸೆ ಸಹಿಸಲಾರದೆ ।
ಆರ್ತರಕ್ಷಕಬಂದೆ ಧಾವಿಸಿ ಕೊಡಲಿ ಪಿಡಿಯುತ್ತೆ ॥
ಧೂರ್ತ ಕ್ಷತ್ರಿಯರನ್ನು ನೀಂ ಸಂಹರಿಸಿ ಜಗದಾಭಾರವಿಳಿಸಿದಿ ।
ಮೂರ್ತರೂಪದಿ ಪ್ರಕಟವಾಗುವಿ ಕಾಲಕಾಲಕ್ಕೇ ॥ ೯ ॥

ಜಗದಿ ಸುಖಶಾಂತಿಗಳ ರಾಜ್ಯವ ನೆಲಿಸಲೋಸುವ ರಾಯನಾಮದಿ ।
ಅಗಹರನೆ ಜನಿಸಿದೆ ಮಗನ ರೂಪದಿ ರಾಯದಶರಥಗೇ ॥
ದುರುಳ ರಾವಣ ನಿನ್ನ ರಾಣಿಯ ಸೀತೆಯನು ಕದ್ದೊಯ್ಯಲಾಗಲೆ ।
ಮರಣರಕ್ಕಸಗೆಸಗಿ ಪೊಳೆದೆಯೊ ಸೀತೆಸಹಿತಾಗಿ ॥ ೧೦ ॥

ಕೃಷ್ಣನೆಂಬಭಿಧಾನದಿಂದಲಿ ಪುಟ್ಟಿಜಗದೊಳು ಕೊಂದೆಕಂಸನ ।
ವಿಷ್ಣುಪ್ರಿಯಭಾಗ್ವತದ ತತ್ವವಜಗಕೆಬೀರಿದಿಯೋ ॥
ಕೃಷ್ಣೆಪತಿ ಪಾಂಡವರ ರಕ್ಷಿಸೆ ಶ್ರೇಷ್ಠ ಸಾರಥಿಯಾಗಿ ಪಾರ್ಥನ ।
ಶ್ರೇಷ್ಠ ಗೀತೆಯ ಮರ್ಮವನು ನೀಂ ನರಗೆ ಬೋಧಿಸಿದಿ ॥ ೧೧ ॥

ಅರುಹ ಲೋಸುಗ ಜಗಕೆ ನಿಃಸಾರತೆಯ ಸಂಸಾರದಲಿ ತೋರುವ ।
ಪರಮ ಯೋಗಿಯ ರೂಪಿನಿಂದಲಿ ಬುದ್ಧನೀನಾದೀ ॥
ಕರುಣೆಪೂರಿತ ಹಿಂಸೆಯರಿಯದ ಗಾಂಧಿಯೆಂಬಾ ಸುತನ ಕಳುಹಿದಿ ।
ಪರಮ ನಿನ್ನಯ ತತ್ವಬೀರಲು ಜಗದಿ ಶಾಶ್ವತವ ॥ ೧೨ ॥

ದುರುಳನೊರ್ವನು ಗಾಂಧಿದೇಹವ ಕೆಡಹಲಾತನ ಪ್ರಾಣವಕ್ಕಿಯು ।
ಭರಪೆ ಹಾರಿತು ನಭಕೆ ಪೊಳೆಯುಲು ಚಂದ್ರ ಮಂಡಳದಿ ॥
ಮರುಳು ಜನರಿಹ ಗಾಂಧಿ ತತ್ವವ ಮರೆತು ತಮ್ಮೊಳು ಜಗಳಗೈವರು ।
ಬಿಗಿದು ನಿಂತಿದೆ ಕದನ ಸೂಚಕ ಮುಗಿಲು ವಿಶ್ವದೊಳು ॥ ೧೩ ॥

ಜಾತಿವರ್ಣಗಳೆಂಬ ನೆಪದಿಂ ಕೋತಿಯಂದದಿ ಕಲಹಗೈಯುತೆ ।
ಸ್ವಾರ್ಥಪೂರಿತ ಜನರು ಜಗದೊಳು ಮೆರೆವರೆಲ್ಲೆಲ್ಲಾ ॥
ಭೀತಿಯಿಂದಲಿ ಕಾಣುತಿರ್ಪರು ಬಂಧು ಜನಗಳು ತಮ್ಮತಮ್ಮೊಳು ।
ನೀತಿ ಬೋಧಿಸೆ ನಿನ್ನಗತ್ಯವು ಯಿಂದು ತಾನಿಹುದು ॥ ೧೪ ॥

ಕಲಿಯು ಮದವನು ಯಿಳಿಸೆ ನಿನ್ನಯ ಕಲ್ಕಿಯವತಾರಕ್ಕೆ ಸಮಯವು ।
ಒದಗಿ ಬಂದಿದೆ ಬಾರೊ ಹರಿಯೆ ಭಾರವಿಳಿಯುವಕೇ ॥
ಗಲಿತವಾಗಿಹ ನೀತಿಯೆಮ್ಮೊಳು ಮೆರಿಸಿ ಬಳಯುತರನ್ನು ಮಾಡುತೆ ।
ಹರಿಸೋ ಮಾನವ ಕುಲವ ಹರಿಯೇ ಸನ್ಮಾರ್ಗತೋರುತಲೀ ॥ ೧೫ ॥

## ೧೯ ಮದಿರಾ ರಗಳೆಯು

ಬಂಡನೋರ್ವ ತಾ ರಂಡಿಯ ಮನೆಯೊಳು, ಹೆಂಡಕುಡಿದು
ನಿಶೆಯಾಗುತಲವನೂ ।
ಹೆಂಡಿರು ಮಕ್ಕಳ ಪರಿವೆಯು ಯಿಲ್ಲದೆ, ಕಂಡಹಾಗೆ ತಾ ಜೋಲಿಯ
ಹೊಡೆಯುತೇ ।
ಕಂಡಕಡೆಗೆ ತಾನೂರೊಳು ತಿರಗುತೆ, ಬಂಡಬಂಡತಾ ಬೈಗಳ ಬೈಯ್ಯುತ
ಅಂಡಜೋದ್ಭವನ ಸೃಷ್ಟಿಯೊಳುತಾ, ಚಂಡವಿಲಕ್ಷಣ ಪ್ರಾಣಿಯು
ತೋರುತೆ ।
ಖಂಡಪರಶುವಿನ ರಾಜ್ಯದಿ ಮೆರೆವಾ, ಖಂಡಪಿಶಾಚಿಗಳಾಗ್ರಣಿ ತೋರುತೆ ।
ಕೆಂಡದಂಥಕಣ್ಜ್ಯೋತಿಯು ಬೀರುತೆ, ತಂಡ ತಂಡ ಜನದಿಟ್ಟಿಯಶೆಳೆಯುತೆ।
ಚಂಡರಾತ್ರಿಯಲಿ ಬಿಸಿಲೆನ್ನುತೆ ಕೂಡೆ, ಕೊಂಡು ಮಾರ್ಗದೊಳ್ನಡೆದಿರೆ
ಮಧ್ಯದಿ ।

ಕಂಡು ನೆಲವನೊಳೆಯೆನ್ನುತ ಲೀಡುತೆ, ಕಂಡಹಾಗೆ ವ್ಯಗಾಸಿಯ
ಗೊಳಿಸುತೆ !

ಪುಂಡತನವ ತಾನೀಪರಿ ನಡಿಸಿರೆ ತಂಡವೊಂದು ಪೋಲೀಸರ ಬಲವ ।

ತಂಡಿ ತೀರ್ದುನಿಶೆಯೊಳಿಯುತೆ ಲಾಚಣ, ದಂಡಿತನಾಗುತೆ
ಕೆರಿಮನೆ ಸೇರ್ದನು ॥

## ೨೦ ರಾಷ್ಟ್ರಾತ್ಮನು.

ಅಕೋ ಅಲ್ಲಿಹಾನ, ಇಕೋ ಕಾಣಿಸತಾನ ।
ಸರ್ವರಲ್ಲಿಹಾನ, ಸಜ್ಜನರಪಾಲಿಸತಾನ ॥ ೧ ॥
ದೇಹವನ್ನು ತಿನ್ನ, ಮನೆಯ ಮಾಡಿರತಾನ ।
ದೇಹದೊಳಗೆಯಾತ್ಮ, ನಾಗಿತಾನಿರತಾನ ॥ ೨ ॥
ದೇಹವಳಿಯೆತಾನೂ, ಮೇಲೆಹೋಗತಾನ ।
ದೇಹಪ್ರಕೃತಿರೂಪಾ, ಆತ್ಮನೀಶರೂಪಾ ॥ ೩ ॥
ಕಣವು ತಾನೆದೇಹಾ, ಕೌರವರ ರಣಕ್ಷೇತ್ರಾ ।
ಕೌರವರೆ ಷಡ್ವೈರಾ, ವಿವೇಕತಾನೆ ಪಾರ್ಥಾ ॥ ೪ ॥
ಆತ್ಮತಾ ಪರಮಾತ್ಮಾ, ಪಾರ್ಥಸಾರಥಿಕೃಷ್ಣಾ ।
ಹೃದಯತಾನೆರಥವೂ, ಕಣವುತಾನೆದೇಹಾ ॥ ೫ ॥
ರಾಷ್ಟ್ರತಾನೆದೇಹಾ, ಕೌರವರಯುದ್ಧಭೂಮಿ ।
ಕೌರವರೆಪಾರತಂತ್ರ್ಯ, ಜವಹಿರನೆತಾನೆಪಾರ್ಥ ॥ ೬ ॥
ಜವಹಿರನು ಯುದ್ಧಪೂಡೆ, ಸಾರಥಿಯುಗಾಂಧಿಯಾಗಿ ।
ಬೋಧಿಸಿದಕರ್ಮಯೋಗಾ, ಮಹಾತ್ಮಕರ್ಮಯೋಗಿ ॥೭॥
ಜಯಲಕುಮಿತಾನೆಸಾರೀ, ಮಹಾತ್ಮತಾನುಹಾರೀ
ಪರಮಾತ್ಮನಡಿಯಸಾರೀ, ಬೆಳಗಿದನನಂತಜ್ಯೋತೀ ॥ ೮ ॥

## ೨೧ ಮಂಗಳಲೋಕದದೂತನು.

ಜಗವನು ನೋಡಲುಭರದಲಿ ಬಂದನುಮಂಗಳ ಲೋಕದದೂತನುತಾನೂ।
ಜಗದಲಿ ಮನುಜರನಡುವಳಿ ನೋಡಲು ಭೂಮಿಗೆತಾನಿಳಿದೂ ॥
ಜಗದೊಳು ಕಾನನಸಿರಿಹಾಳಾದುದ ನೋಡಲುಕರಗಿತುಮನವಾದೂತನ ।
ಜಗದೊಳಗಣಜನ ಕಾನನ ಬೆಳಸದೆಗೆಡಿಸಿಹ ಹಾಳದನೆನ್ನುತಲಿ ॥ ೧ ॥

ಮುಂದೆ ನಡೆಯುತವ ಹೊಲದೋಟಂಗಳ ನೋಡಿದ ಬೆಳೆನಿಸ್ತೇಜಗಳಾ ।
ತಂದೆ ಜಗತ್ಪತಿ ಕೊಟ್ಟರೆ ಮಳೆ ಹೊಳೆ ಸರಗಳ ನೀಜನರೂ ॥
ಚಂದದಿಂದೆ ಶ್ರಮವಹಿಸುತೆ ಕಾಲುವೆ ಕಡಿಯುತೆ ಹೊಲನೀರ್ಗುಡಿಸದಲೆ।
ಅಂದಗೆಡಹುತೆ ಬೀಳ್ಗಡಹಿಹರಾ ಅಂಧರು ಮಾನವರು ॥ ೨ ॥

ಇಂತು ಮನದೊಳೆ ಚಿಂತಿಸಿನಡೆದನು ಹಳ್ಳಿಯಜನಗಳ ನೋಡ್ವವುದಕೇ ।
ಸಂತೆಯಂತೆ ಜನ ನೆರೆದುದ ಕಂಡನು ಚಹದಂಗಡಿಗಳ ಚಪ್ಪರದಿ ॥
ಎಂತು ಹೊಲಗಳಲಿ ದುಡಿಯುವರೀಜನರಿಂತು ದುರ್ವೆಸನ ಮಾಡುತಿರೆ ।
ಇಂತು ಚಿಂತಿಸುತೆ ಮನದೊಳು ಮರುಗಿದ ಶಿವಶಿವನೆನ್ನುತ್ತೆ ॥ ೩ ॥

ಮನೆ ಮನೆತಿರುಗಿದ ತಾನೊಕ್ಕಲಿಗರ ದನಕರು ಧಾನ್ಯದ ಕಣಜಗಳಾ ।
ಸನಿಹದಲಿರುವ ತಿಪ್ಪೆಯಕುಂಡಿಯ ನೋಡಲು ಬಯ-ಸುತ್ತೇ ॥
ಮನೆಗೋದಲಿಯೊಳು ಚಿಪ್ಪಡಿ ಮೇಯುವ ಬಸವನ ಕಂಡನು ಆದೂತ ।
ಎನಿತೀಪರಿ ನೀಂ ಬಿಡುತಲಿ ಸಗ್ಗವ ಬಾಳುವೆ ಜಗದೊಳಗೆ ॥ ೪ ॥

ಇಂತು ಹೊಟ್ಟು ದಾಣಿಗಳನು ತಿನ್ನದೆ ಸೊರಗುತೆ ಬಳಕುತೆ ಬೀಳುತ್ತೆ ।
ಎಂತು ಹೊಲಗಳಲಿ ದುಡಿಯುವೆ ನಿಷ್ಪ್ರಾಣಮನುಜರ ಸಲುವಾಗಿ ॥
ಕಂತೆ ಮುಗಿದಿದು ನಿನ್ನೀಜಗದೊಳು ಇಂತುದುರ್ದಶೆಯ ಪಡೆದಿರೆ ನೀ ।
ಚಿಂತಿಸಿಕೊರಗಿದ ಮನದೊಳೆ ಮರುಗುತೆ ಭ್ರಾಂತಿಯಗೊಳ್ಳುತಲಿ ॥ ೫ ॥

ಹಸುಗಳ ನೀಕ್ಷಿಸೆ ಗೋದಲಿಯೋಳು ತಾ ನಡೆದನು ಬಸವನ ಮಾತೆಯರ।
ಕೃಪೆಯಾಗುತಲವು ಧಾರೆಗಳಿಲ್ಲದೆ ಶಿಶುಗಳ ಬಳಕಿಸುತೆ ॥
ತುಸುಹಾಲನು ಮನೆಯೊಡತಿಯು ಹಿಂಡುತೆ ಮಾರುವಳಾಚಣದೀ ।
ಹೊಸರೊಕ್ಕವ ತಾ ಗಳಿಸಲು ಹಾಲನು ಗೋಳಿಸಿ ಹಸುಗಳನೂ ॥ ೬ ॥

ಕಾಳಿನ ಕಣವ ನೋಡಲು ಪೋದನು ಕಾಳಿಲ್ಲದಲಿಲಿ ಹೆಗ್ಗಣವು ।
ಮೇಳಿಸಿ ತಾಂಡವ ನಡಿಸಿರೆ ಅತ್ತನು ಗೋಳನು ರೈತರ ಸ್ಮರಿಸುತಲಿ ॥
ಕಾಳುಗಳೆಲ್ಲಿಂ ಪಡೆಯುವೆ ತಿನ್ನಲು ರೇಶನ್ ಬಾರಿಯೆ ತನಗೆಂದೂ ।
ಗೋಳಿಟ್ಟತ್ತನು ದುಃಖದಿರೈತನು ಹಾಳಿನ್ನಯ ಬಾಳಿನ್ನುತಲಿ ॥ ೭ ॥

ಬಾಳನು ನಮ್ಮಯ ಸುಖಮಯ ಮಾಡಲು ದುಡಿದನು ಗಾಂಧಿಯು ನಮ್ಮಪ್ಪ ।
ಖೂಳನು ಸಹಿಸದೆ ಕೊಂದನು ಗಾಂಧಿಯ ನಾವಾಗಿರುವೆವು ಪರದೇಶಿ ॥
ಆಳುವಜನಗಳು ನಮ್ಮರು ಇರ್ದೊಡೆ ಸ್ವಾರ್ಥದಿ ಕೆಲಜನ ಪೀಡಿಪರೂ ।
ಗೋಳುಗಳೆಲ್ಲವು ಬೆಳೆದಿವೆ ಗಾಂಧಿಯು ನಮ್ಮಯ ಮಧ್ಯದಿತಾಪೋಗೆ ॥೮॥

ಇಲ್ಲದಾಸೆಗಳ ಹಚ್ಚುತ ಬರುವರು ಧೂರ್ತರು ಹೋಟನು ಪಡೆವುದಕೆ ।
ಎಲ್ಲ ಹೋಟುಗಳನೆತ್ತುವರು ಮೋಸದಿ ತಮ್ಮಯ ದುಡ್ಡಿನ ಬಲದಿಂದೆ ॥
ಮೆಲ್ಲ ಮೆಲ್ಲನೆ ವಚನವ ಮುರಿಯುತೆ ಸೊಕ್ಕಲಿ ಮೆರೆವರು ಸಭೆಗಳಲಿ ।
ಇಲ್ಲಿ ಜನಗಳು ಪಡುತಿಹಗೋಳನು ತಿಳಿಯದಲೆಂದೆಂದೂ ॥ ೯ ॥

ನಮ್ಮ ರಾಜ್ಯವನು ನಾವಾಳುತಲಿರೆ ನಮ್ಮದು ಸುಖವದು ತಾನಿರದು ।
ನಮ್ಮನಮ್ಮೊಳು ನಾಡೊಳು ನಡದಿದೆ ಕಲಹವು ಯೆಲ್ಲೆಡೆಗೂ ॥
ನಮ್ಮ ನಾಡಿದು ಹೆಮ್ಮೆಲಿ ಮೆರೆವಾ ದಾರಿಯ ತೋರ್ಪುದು ಕರುಣದಲಿ ।
ನಮ್ಮನಿಮ್ಮಗಳ ಜಗದೊಡೆಯನು ವೊಬ್ಬನೆ ಸಿರಿಹರಿ ಭಗವಂತಾ ॥ ೧೦ ॥

ಸಹಕಾರಕದ ಸಂಘವ ನಿರ್ಮಿಸಿ ಹೊಲಗೂಡಿಸುತೆ ಬೆಳೆಯಿರಿ ಪೈರಾ ।
ಮಹಜನ ಸಂಘದಿ ಪೊಳೆವುದು ತೇಜವು ಸುತ್ತಲು ಜಗಮೊಳಗೇ ॥
ಸಹಕರಿಸುತೆ ನೀವ್ಮಾಡುತೆ ದುಡಿಯಲು ಬಂಧುಗಳೆಲ್ಲರು ಒಮ್ಮನದಿ ।
ಸಹಕರಿಸುವನವ ಮುರಹರಿ ನಿಮ್ಮೊಳು ಶಾಶ್ವತ ಸುಖಗಳ ನೀಡುತ್ತೆ ॥೧೧॥

ಹಳ್ಳಿಯ ಉದ್ದಿಮೆಗಳ ನೀವ್ಬೆಳೆಯಿಸಿಕೊಳ್ಳುತೆ ಬಾಳಿರಿವುಳ್ಳವರೋಳ್ ।
ಸುಳ್ಳರು ಕಳ್ಳರುಯೆನ್ನಿಸಿಕೊಳ್ಳದೆ ಸಜ್ಜನರೆಂಬಭಿಧಾನವ ಗಳಿಸಿರಿ ॥
ತಿಳ್ಳಿಆಟದಲಿ ನಿಪುಣರು ನಿಮ್ಮೆಡೆಬಂದೊಡೆ ಮಾತಗಳ ಬೆಡ್ಡುವದಕೆ ।
ತಳ್ಳಿಹಾಕುತಲಿ ನಿಮ್ಮೊಳು ಪಳ್ಳಿಯ ರೈತನಕಳುಹಿರಿ ಪ್ರತಿನಿಧಿಯ ॥೧೨॥

ದಿಲ್ಲಿಯಲಿರ್ಪ ನಿಮ್ಮಯ ಹಿರಿಯರು ಚಿಂತಿಸುತಲಿರ್ಪರು ನಿಮ್ಮಯ ಹಿತವ।
ಅಲ್ಲಿಗೆ ತಿಳುಹಲು ನಿಮ್ಮಯ ಗೋಳನು ಧಾವಿಸಿ ಬರುವರು ಸಾಂತ್ವನಕೆ।
ಗುಲ್ಲನೆಬ್ಬಿಸುವ ಧೂರ್ತರ ತ್ಯಜಿಸುತೆ ನಂಬಿರಿ ನಿಮ್ಮಯ ನಾಯಕರ ।
ಎಲ್ಲಸೌಖ್ಯಗಳನೊದಗಿಸೆ ನಾಯ್ಕರು ದುಡಿವರು ನಿಮ್ಮಯ ಸಲುವಾಗೀ॥೧೩॥

ಮೂಢನಂಬುಗೆಗಳೆಲ್ಲನು ಬಿಸುಟುತೆ ಮಾಡಿರಿ ಸುಖಮಯ ಬಾಳುವೆಯಾ।
ಮಾಡುತೆ ಕಾಯಕ ಮುಡಿಯಿರಿ ತೋಷದಿ ನಿಮ್ಮಯ ನಾಡಿನ ಸಲುವಾಗಿ ॥
ದೂಡಿರಿ ಜಾತಿವಿಜಾತಿಯ ಜಗಳವ ಕೂಡುತೆ ನಾಡಿಗರೆಲ್ಲರು ನೀವು ।
ಮಾಡಿರಿ ಬಿಜ್ಜೆಯ ಪ್ರಸರಣೆಯೆಲ್ಲೆಡೆ ಬೆಳಗಿರಿ ಜ್ಞಾನದ
ಜ್ಯೋತಿಯನೂ ॥೧೪॥

ಇಂತು ದೂತತಾ ರೈತನ ಸಾಂತ್ವನಗೊಳಿಸುತೆ ನಡೆದನು ಶಹರಕ್ಕೇ ।
ನಿಂತು ನೋಡಿದನು ಧೂರ್ತರು ಮುರಿವುದ ಬಡವರ ಕತ್ತುಗಳಾ ॥
ಎಂತು ಮಾನವರು ನೀತಿಯ ಬಿಡುತಲಿ ಮಾಡುತಲಿಹಕಾ ಸಂತೆಯ ಕಷ್ಟನು।
ಕಂತುಪಿತನೆ ನೀಂ ಶಾಶನಗೈಯ್ಯದೆ ಸುಮ್ಮನೇ ಕುಂತಿರುವೀ ॥೧೫॥

ನಗರನಾಯಕನು ದೂತನ ಕಾಣಲು ಗಡಬಿಡಿಸುತಲವ ತಾ ಬಂದಾ ।
ನಗರ ನಮ್ಮದಿದು ಸಂಪದ್ವೈಭವದಿಂದತಿ ಮೆರೆಯುವದು ॥
ನಗರವಾಸಿಗಳು ಧನವನು ಗಳಿಸುತೆ ಮೆರೆವರು ಸಂತತ ಭೋಗದಲೀ ।
ಜಗಳವಾಡುವರು ತಮ್ಮೊಳು ಸ್ವಾರ್ಥದಿ ವಿದ್ಯೆಯ ಕಲಿತವರು ॥೧೬॥

ದೂತಕೇಳುತಲಿ ನಗರಾಧ್ಯಕ್ಷನ ಮಾತಿಗೆ ಪಡಿನುಡಿದಾ ।
ನೀತಿಬಿಟ್ಟಿಹರು ಯೆಲ್ಲೆಡೆ ಜನಗಳು ನಿಮ್ಮಲೋಕದೊಳೂ ॥
ನೀತಿರಹಿತಧನ ಮಾನಂಗಳ ಪಡೆಯಲು ಸಂತತ ಹೆಣಗುವರೂ ।
ಕೋತಿಯಂದದಿ ಕುಣಿವರು ಹುದ್ದೆಯು ತಾ ಬರೆಮಾನವರು ॥ ೧೭ ॥

ನೀತಿ ತತ್ವಗಳ ಕಲಿಸಿರಿ ನಿಮ್ಮಯ ಪಾಠ ಶಾಲೆಯ ಬಾಲರಿಗೇ ।
ನೀತಿವಂತರನೆ ಗುರುಗಳನೊದಿಸೆ ಹಚ್ಚಿಗಿ ಶಾಲೆಯ ಬಾಲಗೆ ॥
ನೀ ... ಟ್ಟುಬರೆ ವೇತನಕಾಗಿಯೆ ದುಡಿವರ ದೂಡಿರಿ ಆಕ್ಷಣದಿ ।
ಏತಕಾಗಿ ನೀವ್ಕೆಡಿಸುತಾಲಿರ್ಪಿರಿ ಭಾವೀಪಿಳಿಗೆಯಾ ॥ ೧೮ ॥

ನೀತಿವುಳ್ಳರನೆ ನೌಕರಿಯೊಳ್ಸರ್ಕಾರವು ಯೆಲ್ಲೆಡೆ ನೇಮಿಸಲೀ |
ನೀತಿಗೆಟ್ಟವಗೆ ಶಾಸನ ವಿಧಿಸಲಿ ದಂಡವನಾಚಣದಿ ||
ನೀತಿವಂತರೆ ರಾಜ್ಯವನಾಳಲು ಯೋಗ್ಯರುಯೆನಿಸುವರೂ |
ನೀತಿಪ್ರಸರಣೆಯು ಆಗಲಿಯೆಲ್ಲೆಡೆ ನಿಮ್ಮೀಜಗದೊಳಗೇ || ೧೯ ||

ಜಾತಿಯೊಂದೆಯೇ ಮಾನವ ಜಾತಿಯು ತಾನಾಗಿರೆ ಜಗದಿ |
ಜಾತಿಭೇದವದು ಹೆಣ್ಣಾಂಡೆಂಬುದು ಸೃಷ್ಟಿಯ ಕ್ರಮದಿಂದೆ ||
ಜಾತಿವಿಜಾತಿಯು ಜಗಳವಪುಡ್ಡುದು ಪಾಶವವೃತ್ತಿಯು ಕೇಳ್ |
ಜಾತ್ಯಂಧತೆಯೂ ದೂಡುತಿ ಹೊಂದಿರಿ ಶಾಶ್ವತ ಸುಖಗಳನೂ || ೨೦ ||

ಹಳ್ಳಿಯ ಜನಗಳು ಬಂಧುಗಳೆಂಬ ಭಾವನೆ ಬೆಳೆಯಿಸಿರಿ |
ವಳ್ಳಿತರಹದ ಶಿಕ್ಷಣ ಸೌಕರವೆಲ್ಲೆಡೆವೊದಗಿಸಿರಿ ||
ಮಳ್ಳತನವ ದೂರೋಡಿಸಿ ಬೆರೆಯಿರಿ ಯೆಲ್ಲರುವೊಂದಾಗಿ |
ಜೊಳ್ಳಭಿಮಾನವ ತೊರೆಯುತಿ ಬಾಳಿರಿ ಎಲ್ಲರು ಸುಖಿಯಾಗಿ || ೨೧ ||

ತರುಣರೆಲ್ಲರೂ ಗಂಡ್ಹೆಣ್ಣೆನ್ನದೆ ಬೆಳೆಸಿರಿ ದೇಹದ ಬಲಗಳನೂ |
ಮರಣಕಂಜದಲೆ ಶಿಸ್ತನು ಕಲಿಯಿರಿ ಶೇರುತಿ ರಾಷ್ಟ್ರದ ಸೈನ್ಯದಲಿ ||
ತರುಣವೃದ್ಧರೂ ಕೂಡಿಯೆ ಹೆಣಗಿರಿ ಬೆಳೆಯಿಸೆ ರಾಷ್ಟ್ರದ ಸಂಪದವಾ |
ತರುಣತರುಣಿಯರೆ ಕೊಳ್ಳಿರಿ ಪಣವನು ನಾಡಿಗೆಯರ್ಪಿಸೆ
ದೇಹಗಳಾ || ೨೨ ||

ಹೊಲೆತನವೆಂಬುದು ಬಾರದು ಜನನದಲೆಂಬುದ ನೀವ್ತಿಳಿದೂ |
ಹೊಲೆಯರೆಂದು ನೀವ್ಹಳಿಯಲು ಬೇಡಿರಿ ನಾಡಿನ ಬಂಧುಗಳಾ ||
ವೊಲಿಮೆಯಿಂದ ನೀವಪ್ಪಿರಿ ನಿಮ್ಮಯ ಪೀಡಿತ ಬಾಂಧವರಾ |
ಹೊಲೆತನ ಕೃತ್ಯವಮಾಳ್ಪರ ದೂಡಿರಿ ಬೋಧಿಸೆ ಶಾಸನ
ಬಂದಿಯಲೀ ||೨೩||

ನಿಮ್ಮಲೋಕದೊಳು ವಾಸಿಪ ಜನಗಳು ವೊಂದೇಮನೆಯವರೂ |
ನಿಮ್ಮೊಳು ಕೆಲಬರ ಪೀಡೆಯೆ ಸರ್ವರ ನಾಶಕೆ ಕಾರಣವೂ ||
ನಿಮ್ಮ ನಿಮ್ಮಗಳ ಭೇದದ ಕಲ್ಪನೆತ್ಯಜಿಸಲು ನೀವಾಗ |
ಹೆಮ್ಮೆಯಿಂದ ನೀವ್ಮೆರೆವಿರಿ ಜಗದೊಳು ಬೊಮ್ಮನ ದಯೆದಿಂದೆ || ೨೪ ||

ನಿಮ್ಮ ಶ್ರೇಷ್ಠ ಪಥ ವೊಮ್ಮನದಿಂದಲಿ ಹಿಡಿರಿ ಜಗದೊಳು ಯೆಲ್ಲೆಡೆಗೇ ।
ನಿಮ್ಮ ನಿಮ್ಮಗಳ ಬೇಧವ ನಳುಕಿಸಿ ಬಾಳಿರಿ ಬೆಳಗಿರಿ ಪ್ರೇಮದಲೀ ॥
ನಿಮ್ಮಲೋಕದೊಳು ಬೆಳೆಯಲು ಐಕ್ಯವು ಯೆಲ್ಲೆಡೆ ಸಿರಿಹರಿ ದಯದಿಂದೆ ।
ನಮ್ಮನಿಮ್ಮಗಳ ಶಾಸ್ವತ ಮೈತ್ರಿಯು ಬೆಳೆವುದು ನಿಷ್ಟಯದಿ ॥ ೨೫ ॥

ನಮ್ಮನಿಮ್ಮಗಳ ಲೋಕಕ್ಕೊಡೆಯನು ವೊಬ್ಬನೆ ಭಗವಂತಾ ।
ಭಿನ್ನಭಿನ್ನಲೋಕದೊಳವನ್ನು ಪುಟ್ಟಿಸಿ ಲೀಲೆಯ ಪೂಡಿಹನು ॥
ನಮ್ಮನಮ್ಮಗಳ ಕಾಯಕವೆಸಗುತೆ ಮಡಿಯಲು ನಾವಂದು ।
ನಿಮ್ಮ ನಾಯಕನು ಗಾಂಧಿಯು ಪೊಂದಿದ ಲೋಕಕ್ಕೈದುವೆವೂ ॥ ೨೬ ॥

## ೨೨ ಹೊಲೆಯನು

ಹೊಲೆಯ ಕೇರಿಯೊಳಿಲ್ಲ ಯೆಲ್ಲೆಡೆಯೊಳಿಹನು ॥ ಪಲ್ಲ ॥

ನಿತ್ಯಪರಮಾತ್ಮನನ ಭಜಿಸದವ ಹೊಲೆಯ ।
ಸತ್ಯನುಡಿಯನು ಮಾತನಾಡದವ ಹೊಲೆಯ ॥
ನಿತ್ಯಮನುಜರ ಮೋಸಗೊಳಿಸುವಾತನೆ ಹೊಲೆಯ ।
ಸತ್ಯಪಂಥರ ಜರಿಪ ತಾ ನಿತ್ಯ ಹೊಲೆಯ ॥ ೧ ॥

ಹಡೆದ ತಾಯ್ತಂದೆಗಳ ಸೇವೆ ತಪ್ಪಿಪ ಹೊಲೆಯ ।
ಪೊರೆದ ಯಜಮಾನಂಗೆ ತಿರುಗಿ ಬೀಳ್ವನೆ ಹೊಲೆಯ ॥
ಮೊರೆಹೊಕ್ಕವನನ್ನು ಹೊರದೂಡುವವ ಹೊಲೆಯ ।
ಹರಿಯಸ್ಮರಣೆಯ ಮಾಡವದ ಶುದ್ಧ ಹೊಲೆಯ ॥ ೨ ॥

ಗುರುವಿನೋಳ್ನಯ ಭಕ್ತಿ ತೋರದಾತನೆ ಹೊಲೆಯ ।
ಪರರ ಮನವನು ಮದದಿನೋಯಿಪನು ಹೊಲೆಯ ॥
ಪರಧನವ ಪರಸತಿಯ ಬಯಪ ಮಾನವ ಹೊಲೆಯ ।
ಪರರ ಧರ್ಮವಹಳಿಪ ತಾಪರಮ ಹೊಲೆಯ ॥ ೩ ॥

ಮದ್ಯ ಮಾಂಸಾದಿಗಳ ಸೇವಿಪಾತನೆ ಹೊಲೆಯ
ಕದ್ದು ವ್ಯೆಸನವನಾಡಿ ಶುದ್ಧಿಯ ಮರೆವವ ಹೊಲೆಯ ।
ಇದ್ದುದನು ಸತ್ಕಾರ್ಯದಲಿ ಸವಿಸದಾತನೆ ಹೊಲೆಯ ॥
ಶುದ್ಧ ತನುಮನ ವಾತನರಿಯದವ ಹೊಲೆಯ ॥ ೪ ॥

ತನ್ನಂತೆ ಪರರನು ಬಗೆಯದಾತನೆ ಹೊಲೆಯ ।
ತನ್ನ ನಾಡಿನ ಹಿತಕೆ ಮಡಿಯದವ ಹೊಲೆಯ ॥
ತನ್ನ ನಾಡ್ಸಂಸ್ಕೃತಿಯ ಮರೆವಾತನತಿ ಹೊಲೆಯ ।
ತನ್ನವರ ದೂರುವವ ತಾ ಶುದ್ಧ ಹೊಲೆಯ ॥ ೫ ॥

ತನ್ನ ತಾನರಿಯದಲೆ ಮೆರೆವ ಮೂರ್ಖನು ಹೊಲೆಯ ।
ತನ್ನವರಪೊಲು ಪರರಬಗೆಯದವ ಹೊಲೆಯ ॥
ಹೆಣ್ಣು ಹೊನ್ಮಣ್ಣುಗಳ ನೆನೆದುಗೋಳಿಪ ಹೊಲೆಯ ।
ಧನ್ಯಪರಮೋಕ್ಷವನು ಬಯಸದವ ಹೊಲೆಯ ॥ ೬ ॥

ನಾಡನಾಯ್ಕರ ಮಾತಮೀರಿ ನಡೆವವ ಹೊಲೆಯ ।
ನಾಡಿನಾಡಳಿತದೊಳಗ ಬರುವವ ಹೊಲೆಯ ॥
ನಾಡಕೀರ್ತಿಗೆ ಕುಂದನೊಡ್ಡುವಾತನೆ ಹೊಲೆಯ ।
ನಾಡನಾಡಲಿ ದ್ವೇಷ ಪಸರಿಪನು ಹೊಲೆಯ ॥ ೭ ॥

ನಾಡ ತಂದೆಯ ತತ್ವತಾನಡಿಸದವ ಹೊಲೆಯ ।
ನಾಡಹಿತ ಮಹಾತ್ಮ ಗಾಂಧಿ ಕೊಂದವ ಹೊಲೆಯ ॥
ನಾಡಿನೊಳ ಹಿಂಸೆಸತ್ಯ ಪಸರಿಸಲಾಗ ।
ಗುಡಿಯಿಂ ಮೆರೆದಪುದು ಹೊಲೆತನವನಳಿದೂ ॥ ೮ ॥

# ೨೩ ಮದಿರೆಗೆ ಶರಣು

ಮದಿರೆಯೆಂಬುದದು ತರುವದು ನರನಿಗೆ ಮಾನದ ಹಾನಿಯನೂ ।
ಮದಿರೆ ಸೇವನೆ ಮಾಡಲು ಕೆಡುವುದು ಮಾನವನಾರೊಗ್ಯಾ ॥
ಮದಿರೆ ಶೆಳೆತಕೆ ಬೀಳ್ವನ ಬಾಳುವೆ ನಾಶವಪೊಂದುವುದೂ ।
ಮದಿರೆ ಮಹತಿಯ ನರಿಯುತೆ ದೂರಿರೆ ದೊರೆವವು ಸುಖಶಾಂತಿ ॥ ೧ ॥

ಮದಿರೆ ಪಾನದಿಂ ಮದಿಸುತೆ ದುಷ್ಕೃತಿ ಯೆಸೆದರು ರಕ್ಕಸರು ।
ಮದಿರೆ ಮಾನವನ ಬುದ್ಧಿಯ ಕೆಡಿಪುದು ಮಾಡುತ ನಿಶೆಯುವನ ॥
ಮಡದಿ ಮಕ್ಕಳನು ಗೋಳಿಸಿ ಕೊಲ್ವನು ಮದಿರೆಯು ಶೆಳೆತದಲಿ ।
ಮದಿರೆ ಮಾಡದ ಕೇಡದು ಜಗದೊಳು ಮತ್ತದು ಯೇನಿಹುದು ॥ ೨ ॥

ಮದಿರೆ ಕೆಡಿಸುತೆ ಹಸಿವನು ದೇಹವ ದುರ್ಬಲ ಗೊಳಿಸುವುದು ।
ಮದಿರೆ ಬುದ್ಧಿಯ ಕೆಡಿಸುತೆ ಮಾನಸ ಬಲವನು ಹೀರುವುದು ॥
ಮದಿರೆ ಮಾನವನ ದೇಹದಿ ಷಡ್ರಿಪುಚೇತನ ಗೊಳಿಸುವುದು ।
ಮದಿರೆ ಮಾನಸ ವಿವೇಕವನೋಡಿಸಿ ದುಃಖದಿ ನೂಂಕುವುದು ॥ ೪ ॥

ಮದಿರೆ ನೀತಿಯ ಕೆಡಿಸುತೆ ಜನರೊಳು ಮಾನವ ಕಳೆಯುವದು ।
ಮದಿರೆ ಧನವನು ಶೆಳೆಯುತೆ ತರುವುದು ಬಡತನ ಮನುಜನಿಗೆ ॥
ಮದಿರೆ ಮನೆಯೊಳು ಕಲಹ ಪುಟ್ಟಿಸಿ ಕಳೆವುದು ಗೃಹಸುಖವಾ ।
ಮದಿರೆ ಮೋಹವ ಬಿಟ್ಟೊಡೆದೊರೆವವು ಶಾಶ್ವತ ಸುಖಶಾಂತಿ ॥ ४ ॥

ಮದಿರೆ ವೋಡಿಸಲು ಪುಸಿಪ್ಪುಟಜಾಣ್ನನ ಜಗದೊಳು ತಿರುಗಿದನು ।
ಮದಿರೆ ಭಕ್ತರೆ ಜಗದೊಳು ತುಂಬಿರೆ ಮನದೊಳು ಮರುಗಿದನು ॥
ಮದಿರೆ ಭಾರತದಿ ಬಹುತಾನಿರದಿರೆ ಮನಶಾಂತಿಯ ಹೊಂದಿದನು ।
ಮದಿರೆ ಭಾರತದಿ ಜನಗಳು ಸಿಪ್ರದಲೋಡಿಸ ಬಯಸಿದನು ॥ ೫ ॥

ಮದಿರೆ ಭಾರತದಿ ಬಂದಿಸೆ ಹಿರಿಯರು ಶಾಸನ ಮಾಡಿಹರು ।
ಮದಿರೆ ಶೀಘ್ರದೋಚ್ಚಣ್ಮರಿಯಾಗ್ಸುದು ನಮ್ಮಯ ನಾಡಿಂದ ॥
ಮದಿರೆ ಪೋಗೆ ಬಾಳ್ವಾಗ್ವದು ನಮ್ಮದು ಸಂತತ ಸುಖಮಯವು ।
ಮದಿರೆದೇವಿ ನಾವಾಬ್ಲಿಪ್ಪವು ನಿನ್ನಯ ದಿಕ್ಕಿಗೆ ಶರಣೆಂದು ॥ ೬ ॥

# ೨೪ ನೇಸರನು.

ಉಕ್ಷೆಯನು ವರಿಸಲು ಜಗದಲಿ ಬರುವನು ಮೂಡಣದಿಕ್ಕನ್ನೆಯ ಮಗನು ।
ಹಸುಮಗುವಾಗುತೆ ಪೊಣ್ಗದಿರಿಂದಲಿ ಹೊಳೆಯುವನಾಗಸದಿ ॥
ನಸುಗೆಂಪಾಗಿಹ ಮುಖದಿಂ ಬೆಳಗುತೆ ಚೇತನ ಬೀರುವ ವಿಶ್ವದೊಳು ।
ರಸವನು ತುಂಬುತೆ ಯೆಲ್ಲೆಡೆಯೊಳ್ತಾ ಚೇತನ ಗೊಳಿಸುವನು ॥ ೧ ॥

ಜಗದೊಳುಬರೆ ತಾ ಮರೆವನು ಪ್ರಿಯತಮೆ, ತೊಡಗುವನಾಚಣ ಕಾರ್ಯದಲಿ।
ಜಗಿಯುತೆ ತೇರೇಳ್ಗುದುರೆಗಳೆಳೆಯಲು ಖಂಜನು ಸಾರಥಿರಥಹೊಡೆವಾ ॥
ಮೊಗದೊಳು ತಾನುಗ್ರತೆಯನು ಪಡೆಯುತೆ ನಭದೊಳುರಭಸದಿ
ಕ್ರಮಿಸುವನು ।
ಜಗವನು ಕ್ರಮದಿಂ ಸುತ್ತಲು ತಪ್ಪದೆ ಪಡುವಣ ಬೆಟ್ಟದಿ ವಿಶ್ರಮಿಪ ॥ ೨॥

ನಿದ್ರೆಯೆಲ್ಲಿಯದು ನೇಸರಗೆನುತಲಿ ಸಾಗುನಾಚಣ ಪಾತಳ ಲೋಕಕೆ ।
ಎದ್ದುಸಾಗುವನು ಕಾರ್ಯವ ಮಾಡಲು ಆಸರಬೇಸರವರಿಯದಲೇ ॥
ಶುದ್ಧ ಮನದಿ ತಾ ಕಾಯಕ ಮಾಡುತೆ ಕಾಯಕ ಮಹತಿಯ ಬೀರುವ
ಜನಕೆ ।
ಎದ್ದು ಮನುಜರೆ ಕಾರ್ಯವ ಮಾಡಿರಿ ಜಗದೊಳು ಬೆಳಗಿರಿ
ನನ್ನಂತೆ ॥ ೩ ॥

ಹೆಂಡಿರು ಮಕ್ಕಳ ಮೋಹವ ಬಿಡುತಲಿ ಖಂಡಿತ ದುಡಿಯಿರಿ ಸಂತತವ ।
ಕಂಡಕಂಡಕಡೆ ಮನವನು ಚಲಿಸದೆ ಕಾಯಕದೊಳ್ಮನ ವಿಕ್ಕುತಲಿ ॥
ತುಂಡು ಹೊಂದಿದ ಬಂಧುಗಳೊಂದೆಡೆಕೂಡಿಸಿ ಮೆರೆಯಿರಿ ಜಗದೊಳಗೆ ।
ಬಂಡುತನಕೆ ನೀವ್ಕೊಡದಿರಿ ತಾಣವ ನೀತಿಯ ಮಾರ್ಗದಿ
ನಡೆಯುತ್ತೆ ॥ ೪ ॥

ಆಸರಬೇಸರಗಳ ದೂರೊತ್ತುತೆ ಮಾಡಿರಿ ನಿಮ್ಮಯ ಕಾಯಕ ಸಂತತದಿ ।
ನೇಸರನಂತೆಯೆ ತೇಜವ ಬೀರಿರಿ ಸಂತತ ಜಗದೊಳು ಯೆಲ್ಲೆಡೆಗೆ ॥
ಹೇಸಿರಿ ಕರ್ಮಕೆ ನೀತಿ ಧರ್ಮದಿ ವಿರಹಿತ ಸ್ವಾರ್ಥದಿ ತುಂಬಿರುವ।
ಭೂಷಣವೆನಿಪ ಕಾರ್ಯವ ಮಾಡುತೆ ಪಡೆಯಿರಿ ಶಾಶ್ವತ
ಕೀರ್ತಿಯನು ॥ ೫ ॥

ಇಂತು ನೀತಿಯನು ನೇಸರ ಬೋಧಿಪ ತನ್ನಯ ನಿತ್ಯದ ಕೃತಿಯಿಂದೆ ।
ಇಂತೆಯ ನಮ್ಮಯ ಗಾಂಧಿಪೇಳಿದನು ಶಾಶ್ವತ ನಮ್ಮಯ ಸುಖಕಾಗಿ ॥
ಇಂತು ಬೋಧಿಸುತಲಾಗಸದೊಳ್ ಸತ್ಯಕೊಳಿವನು ನಮಗಾಂಧಿ ।
ಇಂತು ನಡೆದೊಡೆ ಶಾಂತಿ ಸೌಖ್ಯದಿಂ ಮೆರೆವುದು ಸಂತತ
ಭೂಲೋಕಾ ॥ ೬ ॥

## ೨೫ ಕೋಲಾಟವು

ಕೋಲುರನ್ನದ ಕೋಲುಚಿನ್ನದ ಕೋಲುಹವಳದ ಪವಳದ ಸ್ವಾಮಿ ।
ಕೋಲು ಹವಳದ ಪವಳದ ॥
ಕೋಲು ವಯ್ಯು ಪಾಡಿರೆ ನವು ಬಾಲನ ಗೋಪಾಲನ ಸ್ವಾಮಿ ।
ಬಾಲನ ಗೋಪಾಲನ ॥ ಪಲ್ಲ ॥

ಮಹಿಮೆ ತೋರುತೆ ಬಂದಳಾಕೆ ಮಹಸತಿಯು ತೇಜವ ಬೀರುತೆ ಸ್ವಾಮಿ ।
ಮಹಸತಿಯು ತೇಜವ ಬೀರುತೆ ॥
ಮಹಿಮೆ ಪಡೆಯಲು ಬಯಸುವವರಿಗೆ ಮಹಸತಿಯು ಮಾರ್ಗವ ತೋರುತೆ
ಸ್ವಾಮಿ
ಮಹಸತಿಯು ಮಾರ್ಗವ ತೋರುತೆ ಸ್ವಾಮಿ ॥ ೧ ॥

ಅತ್ತೆಮಾವರ ಸೇವೆಮಾಡುವ ಚೊಕ್ಕಸಾಧ್ವಿಯು ಯೆನಿಸುತೆ ಸ್ವಾಮಿ ।
ಚೊಕ್ಕಸಾಧ್ವಿಯು ಯೆನಿಸುತೆ ॥
ಸುತ್ತುಜನ ಮಧ್ಯದಲಿ ಪೊಳೆವಾ ಶ್ರೇಷ್ಠಪೆಣ್ಮಣಿಯೆನಿಸುತೆ ಸ್ವಾಮಿ ।
ಶ್ರೇಷ್ಠಪೆಣ್ಮಣಿ ಯೆನಿಸುತೆ ॥ ೨ ॥

ಪತಿಯೆ ದೈವತವೆಂದು ಭಾವಿಸಿ ಸತತಲವನನು ಸೇವಿಪ ಸ್ವಾಮಿ ।
ಸತತಲವನನು ಸೇವಿಪ ಸ್ವಾಮಿ
ಪತಿಯ ಮನೆದೇವತೆಯು ಯೆನಿಪಳು ಸಾಧ್ವಿಮಣಿ ಕಸ್ತೂರಿಯು ಸ್ವಾಮಿ ।
ಸಾಧ್ವಿಮಣಿ ಕಸ್ತೂರಿಯು ॥ ೩ ॥

ವೀರಪುತ್ರಿಯು ವೀರಪತ್ನಿಯು ವೀರಪುತ್ರರ ಮಾತೆಯೂಸ್ವಾಮಿ ।
ವೀರಪುತ್ರರ ಮಾತೆಯು ॥
ಧೀರಗುಣಸಂಪನ್ನೆ ರಾಷ್ಟ್ರದ ಹೆಮ್ಮೆಯಸತಿ ಯೆನಿಸಳೂ ಸ್ವಾಮಿ।
ಹೆಮ್ಮೆಯಸತಿ ಯೆನಿಸಳು ॥ ೪ ॥

ಶ್ರೇಷ್ಠಗಾಂಧಿಯ ಪ್ರೇಮ ಪುತ್ಥಳಿ ಕಸ್ತೂರಿ ಪರಿಮಳ ಬೀರ್ವಳು ಸ್ವಾಮಿ।
ಕಸ್ತೂರಿ ಪರಿಮಳ ಬೀರ್ವಳು ॥
ಶ್ರೇಷ್ಠ ಪೆಣ್ಮಣಿ ಪಥದಿ ನಡೆಯುತೆ ನಾಡ ಹೆಮ್ಮೆಯ ಬೆಳಸಳೂ ಸ್ವಾಮಿ।
ನಾಡ ಹೆಮ್ಮೆಯ ಬೆಳಸಳೂ ॥ ೫ ॥

ಶೀಲಗುಣಸಚ್ಚರಿತೆ ಯುಕ್ತಳು ನಾಡಜ್ಯೋತಿಯು ಮೆರೆವಳು ಸ್ವಾಮಿ ।
ನಾಡಜ್ಯೋತಿಯು ಮೆರೆವಳು ॥
ಶೂಳಿಯ ದಯದಿಂದೆ ಗಾಂಧಿಯಃವಾಮ ತೊಡೆಯಲಿ ಮೆರೆದಳು ಸ್ವಾಮಿ ।
ವಾಮತೊಡೆಯಲಿ ಮೆರೆದಳು ॥ ೬ ॥

ಸಾಧುಸಂತರ ರಾಷ್ಟ್ರಪುರುಷರ ಮಾತೆಯೆನಿಸಳು ಪೆಣ್ಮಣಿ ಸ್ವಾಮಿ ।
ಮಾತೆಯೆನಿಸಳು ಪೆಣ್ಮಣಿ ॥
ಸಾಧುದಂಪತಿ ದುಡಿದುತಂದರು ಸ್ವಾತಂತ್ರ್ಯ ಲಕುಮಿಯ ನಾಡಿಗೆ ಸ್ವಾಮಿ।
ಸ್ವಾತಂತ್ರ್ಯ ಲಕುಮಿಯ ನಾಡಿಗೆ ॥ ೭ ॥

ಕಸ್ತೂರಿಮಾತೆಯ ಪಥದಿ ನಡೆಯುತೆ ಕಸ್ತೂರಿ ಪರಿಮಳ ಬೀರಿರಿ ಸ್ವಾಮಿ।
ಕಸ್ತೂರಿ ಪರಿಮಳ ಬೀರಿರಿ ॥
ವಿಸ್ತಾರಪಡೆಯುತೆ ನಿಮ್ಮ ತೇಜವು ಜಗಕೆ ಶಾಂತಿಯನೀಯಲಿ ಸ್ವಾಮಿ ।
ಜಗಕೆ ಶಾಂತಿಯನೀಯಲಿ ॥ ೮ ॥

"ಎಲ್ಲ ಜನಗಳು ಸುಖಿಗಳಾಗಲಿ ಎಲ್ಲರೊಳು ಆರೋಗ್ಯ ನೆಲಿಸಲಿ
ಎಲ್ಲಕಡೆ ಶುಭಶಾಂತಿ ಹಬ್ಬಲಿ ದೂರಿ ದುಃಖಗಳ "

**ಓಂ ನಮೋ ನಾರಾಯಣಾಯ ।**

हरिः ॐ ।

# 1. SAVITRI.

My Light Shall be in thee, my strength thy force,
Let not the impatient Titan drive thy heart,
Ask not the imperfect fruit, the partial prize,
Only one boon, to greaten thy kind desire,
Above blind fate and the antagonistic powers.
Moveless there stands a high un-changing will;
To its Omnipotence leave thy work's results.
All things shall change in God's transfiguring
hour.

By "Shri Arbindo." "The Divne Mother"

## 2. A NEW CONSTELLATION.

Lo! behold! there twinkles a luminous star,
Beside the moon in the sky!
Is it the Mars, that shines like a ruby amidst,
Acluster, like the Great Bear ?
Nay, 'Tis neither Mars, nor any planet
that shone,
Ever fixed on high in the sky;
But some great soul departed hence tofind
Its place, amidst the shining stars.

Twinkle, twinkle, little star, how I cherish to
know
The message thou impartest thence!
Dost thou say thy earthly home
was shattered to pieces,
Of a sudden, the year before last,
By some wicked countryman of thine,
that knew not thy great need here?
Pray forgive the erring soul and lead aright
The human race by thy Kindly Light!

What for the constellation of stars around thee
Like a round-table conference in the sky?
Is it a conclave of high souls departed hence,
Drafting the destiny of men below?

Pray, stir the hearts of politicians of high renown
By preaching thy gospel of Truth and Ahimsa;
Teach them well to discern through ingorance dark
And to find their way to bliss eternal!

अहिंसा परमो धर्मः ।



# 3. THE ALWAR TRIO

The sun was setting in the west,
the sky was dark with clouds,
The weary traveller hurried along
a rugged path to reach,
The village ahead, before the angry clouds
would pour in rains.
He tarried not on the way, but walked
straight to his friend's,
To seek supper and lodging and rest
for his wearied limbs,
Receiving there a hearty welcome, he entered
A cosy room to rest.

The room was nice but small, and could hold
a single bed aright,
The traveller laid his wearied limbs to rest,
when of a sudden,
In dark, the door flung open, bringing in
a stranger drenched to the skin.
The two sat up on bed and commenced conversing
the good-ness of God;
Scarce an hour elapsed; there came in a third
Shivering much with cold.
'God be praised,' they cried with joy,
"He brought us three to praise!"

They stood and danced with joy, singing
the eight-syllabelled hymn,
Scarce they uttered "Om Namo Narayanaya,"
they felt closely pressed,
In the dark by an intruder, the door
remaining closed the while,
The friction produced a spark Divine,
exhibitting the Lord Himself!
Lo! there appeared the four-armed Lord,
Conch and Discuss holding!
The three prostrated at Hisfeet, and shouted,

"Om Namo Narayanaya"



# 4 A HEAVENLY BIRD·

A wingless bird flashed in the west,
Like lightening in the cloudless sky,
It had position, but no magnitude,
Like a point in geometry!

Strange, it was unlike any bird I knew,
That, though invisible to the naked eye,
Could touch the cord of my heart within,
And produce a music Divine!

Dead silence reigned all around
The music spread far and wide,
Penetrating each ear that cared,
To listen to music Divine!

Lo! it was a message from Lord Almighty,
Tsansported to individul soul,
That longed to listen with attention fixed,
On the lotus-feet of Lord!

"Listen, ye, motals, Satan is out.
Devastating the peace of ages past,
You seem to have learnt nothing from
The recent two wars of the world!"

"Religion and morals have been dethroned,
From the heart of man on earth.
Noble souls are shunned in general,
And Mahatmas butchered like lambs!"

"The four-fold caste system of man
Based on duties and nature of men,
Hath turned into seed poisonous,
Of communialism every-where!"

"The sister faiths all based upon
The common Sanatana Dharma,
suited to different environments,
Act like rivals with selfish aim!"

"Awake, arise, or be forever,
Fallen, yeilding to Satan's whim!
Know ye, all to be the children.
Of the common Father-the Lord!

"Recognise well the Lord's Fatherhood,
Like-wise the Brotherhood of man,
that ye may all live in peace,
As members of joint-family of man!"

"Know ye full-well the Dharma Sanatana,
That your parents to be the Lord and his Consort
Like-wise know your teachers as Omniscient,
And your guests the Omnipresent Lord!"

"Remember well the basic principles,
Of the great religions of the world;
That the immortal soul lasts forever,
Like the Lord from whom it sprang!"

"May Truth and Ahinsa be ever,
The watch-words of your lives,
The divine messengers from Budha to Mahatma,
Your protecting Angels on earth!

"The journey is long, the time is short,
The road is rugged and obscure,
Haunted by Satan's agents cruel,
That ever lead you astray!"

'Forward, march ahead undaunted!
The high-souled ones like Mahatma,
Will ever light your way through darkness,
And laed you by their Kindly Light!"

"With heart firmly fixed on Lord,
With luminerics lighting your way,
Obeying the dictates of soul within,
March ahead to "Bliss Eternal!"



# 5 SUBAS BOSE

Subas, thou shouldst be living here,
When Bharata hath gained her freedom,
Breaking thy Samadhi deep, show thy self,
To inject her with thy spirit untainted!

Though treading a path different,
Thou art equally loved and revered.
With Mahatma, who like thy self,
Sacrificed his all for our good!

The thought of India's freedom,
Engaged so much of thy heart,
That scarce thou couldst spare time,
To think of taking a bride!

Now the bride of freedom thou strovest for,
Hath appeared holding a garland fair,
Desirous of decorating the neck,
Of the groom that toiled for her hand,"

Sahabas, a true bachelor thou art,
The great Bhisma of our age!
From the arrow-bed as Bhisma watched,
Thou watchest from thy Samadhi bed!

The charrioteer Narayana-Mahatma,
Is missing from the field of battle.
How perplexed Nara-Javahira-be
When he misses his charrioteer in thy absence?

Behind the Antarpata stands thy bride,
Anxious to deck thy neck with arms outstretched;
May the Lord remove the pata and see
This wonder-couple as man and wife,

May ye beget on thy bride many a happy child,
That would thrive soon into manhood and spread,
Peace, plenty and happiness the world over,
And establish a joint family of Man!



# 6. KALKI'S ADVENT.

Hark, listen, there comes the sound
Of hoofs from yonder the hills!
Look, there rises, of a sudden, a column
Of grey dust on the hori zon!

The earth is shaking under the feet
Of the horse, the youth is riding!
Ever gasping for breath, she seems
E'er fresh to continue gallopping.

Further she gollops swiftly bringring.
Her Whole figure within my view.
She presents a huge living machine,
That ev'r appeared on earth!

A wondrous handsome youth He seems,
Hi s eyes shine like lustrous bal ls,
His arms shoot from His stalwart body,
And look like bars of iron hard!

Sheltered by the frowning brows above,
His eyes seem to vomit fire blazing;
Yet a source of compassion are they,
Frcm which mercy flows forth!

Is He Peter, the God of Death,
Come heither to chastise,
The erring souls on earth below
That transgressed the laws of the Lord?

Truly the Lord did say in the Gita, that
He would descend to earth to protect
The good, to punish the wicked,
And to see His Religion thrive!

Is He His son, Prophet or Angel Holy
Of the Lord descended on earth;
Or the Lord in His tenth incarnation,
Come heither to chastise?

Beware ye, mortals, the Lord is wrath
With ye,—the flower of His creation!
May-be, the caste or colour complexion,
Or the enmity at large on earth,

Or the Mammon worship ye do,
Or the sins and selfishness ye practise
Or the recent butchery of His messenger,
Hath brought Him heither in anger!

Beware ye, black-marketeers of this,
The sur prising descent of the Lord!
Desist ye--men and women-,from
The sin and selfish ways of life!

Beware ye, politicians, of the wrath of Lord
And of the war-clouds hanging over-head,
And of the bolt of heaven ready to fall,
That would destroy the whole of ycur race!

Remember ye, that the Lord wishes not
His own creation corrupted thus.
Sure, He will stir His magic wand,
**And establish soon His kingdom on earth!**

सर्वे सुखिनः सन्तु सर्वे सन्तु निरामयाः ।
सर्वे भद्राणि पशयन्तु मा काश्चिद्दुः खभाग्भवेत् ॥
ॐ शान्तिः शान्तिः शान्तिः ।सर्वारिष्ट शान्तिरस्तु ।
समस्त दुरितोपशान्तिरस्तु । समस्त मङ्गलप्राप्तिरस्तु ॥



# ಒಪ್ಪೋಲೆ.

| ಪುಟ | ಸಾಲು | ತಪ್ಪು | ಒಪ್ಪು |
|---|---|---|---|
| ೧ | ೪ | ಮರವಸು | ಪಂವಸು |
| ೩ | ೩ | ಸ್ವಾಗವೆಂಟು | ಸಾಗರಪೆಂಟು |
| ೪ | ೧೯ | ಮೆರೆದಪ್ರುದು | ಪೆರೆದಪುದು |
| ೬ | ೨೦ | ಘಳಿಲನೆ | ಘಳಿಲನೆ |
| ೮ | ೧ | ಕಲಿಪ್ರುರುಷ | ಕಲಿಪುರಂಷ |
| ೧೦ | ೧೯ | ಅದರಿಂದಳ | ಅದರಿಂದಷಿಳ |
| ೧೧ | ೧೬ | ನಡೆಸಿಯೊಜ | ನಡೆಯೊಸಿಜ |
| ೧೨ | ೨೧ | ಪೊರೆಪಳು | ಪೆರೆವಳು |
| ೧೩ | ೧೪ | ಸೂಳಿ | ಸೂಳಿ |
| ೧೬ | ೮ | ಹೋಗಿಲಿ | ಸೋಗಿಲಿ |
| ೧೮ | ೧೨ | ಸೆಕ್ಲಿಸತಂಯರ್ಗಪು | ಸಲ್ಲಿಸಂತಯಾರ್ಗಪು |
| ೧೮ | ೧೮ | ಆದರೊರ್ವ | ಆದರೊಳರ್ವ |



ಎಲ್ಲಿ ಯೋಗೀಶ್ವರನು ಕೃಷ್ಣನೋ ಎಲ್ಲಿ ಪಾರ್ಥನೊ ಬಿಲ್ಲಾಗನುತಾ- ।
ನಲ್ಲಿ ಸಿರಿಗೆಲವುಗಳು ನಿಶ್ಚಿತವೆಂದು ತಿಳಿಯುವೆನೊ ॥

---

Printed at Vijaya Printing Press,
Guledgudd.